# ಚಂದಮಾಮ

(ಜೂನ್-'೭೮) ಈ ಸಂಚಿಕೆಯಲ್ಲಿ

# ಚಂದಮಾಮ

ಸಂಸ್ಥಾಪಕರು : ' ಚಕ್ರಪಾಣಿ '
ಸಂಚಾಲಕರು : ನಾಗಿರೆಡ್ಡಿ

---

"ಕಾಗೆಗಳನ್ನು ಹೊಡೆದು ಹದ್ದುಗಳಿಗೆ ಹಾಕಿದರಂತೆ" ಇದೊಂದು ಸಾಮತಿ. ಕಾಗೆಗಳನ್ನು ಹೊಡೆಯುವುದೇಕೆ? ಹದ್ದುಗಳಿಗೆ ಹಾಕುವುದೇಕೆ? ಎರಡೂ ನಿರರ್ಥಕವೇ. ಸ್ವಾರ್ಥಪರರೇ ಬಹಳವಾಗಿ ಕಾಣಿಸುವ ಈ ಪ್ರಪಂಚದಲ್ಲಿ ಕೆಲವು ಮಂದಿ ಮಹಾ ಉದಾರರಾಗಿ ಕಾಣಿಸುವವರೂ ಇದ್ದಾರೆ. ಅಂತಹರಲ್ಲಿ ಕೂಡಾ ಸ್ವಾರ್ಥವು ಅಡಗಿರುವ ರಹಸ್ಯವು ಸಾಧಾರಣವಾಗಿ ಯಾರಿಗೂ ಕಾಣುವುದಿಲ್ಲ. ಪ್ರಜೆಗಳನ್ನು ಮೆಲ್ಲನೆ ಹಿಂಡಿ ಸಂಪಾದಿಸಿದ ಹಣದಿಂದ ಛತ್ರಚಾವಡಿಗಳನ್ನು ಕಟ್ಟಿಸಿ ಮಹಾದಾತರೆಂಬ ಹೆಸರು ಪಡೆಯುವವರು ಎಷ್ಟೋ ಮಂದಿ ಇರುವರಷ್ಟೆ? ಅಂತಹವರ ಮನಸ್ಸಿನೊಳಗಿರುವ ಸ್ವಾರ್ಥ ಪ್ರಿಯತೆ ಎಂತಹುದೆಂಬುದನ್ನು ಈ ಸಂಚಿಕೆಯಲ್ಲಿರುವ "ಸನ್ಯಾಸಿಯ ವರ" ಎಂಬ ಪುಟ್ಟ ಬೇತಾಳ ಕಥೆ ಬಹಿರಂಗಪಡಿಸುತ್ತದೆ.

---

ಸಂಪುಟ : ೬೦ ಜೂನ್ '೭೮ ಸಂಚಿಕೆ : ೬

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦









ಯದ್ಯಪಿ,.ಪ್ರತಿಪತ್ತಿಸ್ತೇ
ದೈವೀಚಾಪಿ ತಯೋರ್ಮತಂ
ತಥಾವ್ಯಪೇಕ್ಷಣೀಯಂ ತೇ
ನ ಮೇತದಪಿ ರೋಚತೇ ೧.

ನಡೆಯುವುದೆಲ್ಲಾ ದೈವಕಾರ್ಯವೆಂದುಕೊಳ್ಳುವೆ; ಅದು ತಪ್ಪು. ನನಗೆ ಅದು ಸರಿಯೆನಿಸುವುದಿಲ್ಲ.

ವಿಕ್ಲಬೋ ವೀರ್ಯ ಹೀನೋ ಯಃ
ಸ ದೈವಮನುವರ್ತತೇ
ವೀರಾಸ್ಸಂಭಾವಿತಾತ್ಮಾನೋ
ನ ದೈವಂ ಪರ್ಯುಪಾಸತೇ ೨.

ಪರಾಕ್ರಮಿಯಲ್ಲದ, ವೀರತ್ವವಿಲ್ಲದವನೇ ದೇವರ ಮೇಲೆ ಭಾರ ಹಾಕುವನು. ಬುದ್ಧಿವಂತಿಕೆಯುಳ್ಳ ವೀರನಾದವನು ತನ್ನ ಕಾರ್ಯ ತಾನೇ ಸಾಧಿಸಿಕೊಳ್ಳುವನಲ್ಲದೆ ದೇವರಿಗೆ ಬಿಡಲಾರನು.

ದೈವಂ ಪುರುಷಕಾರೇಣ
ಯಸ್ಸಮರ್ಥಃ ಪ್ರಬಾಧಿತುಮ್
ನ ದೈವೇನ ವಿಪನ್ನಾರ್ಥಃ
ಪುರುಷಸ್ಸೋ ವಸೀದತಿ ೩.

ಪುರುಷಪ್ರಯತ್ನದಿಂದ ದೇವರನ್ನು ಲಕ್ಷಿಸದವನು ದೇವರಿಗೆ ಹೆದರಿ ದುಃಖಿಸಲಾರನು.

**ಪುರುಷಪ್ರಯತ್ನ**



# ಕಾಕೋಲೂಕೀಯ

೫೯

ಗುಹೆ ಮಾತಾಡಿದ ಕಥೆಯನ್ನು ಹೇಳಿದ ಮೇಲೆ ರಕ್ತಾಕ್ಷಿ ತನ್ನ ಅನುಚರರೊಂದಿಗೆ ಮತ್ತೊಂದು ಗುಡ್ಡದ ಕಡೆಗೆ ಹೊರಟುಹೋಯಿತು. ಅಲ್ಲಿ ತನ್ನ ರಕ್ಷಣೆಗೆ ಬೇಕಾದ ಏರ್ಪಾಡುಗಳನ್ನೂ ಮಾಡಿಕೊಂಡಿತು.

ರಕ್ತಾಕ್ಷಿ ಹೊರಟುಹೋದುದನ್ನು ನೋಡಿ ಸ್ಥಿರಜೀವಿಗೆ ತುಂಬ ಸಂತೋಷವಾಯಿತು. "ಅದು ಹೊರಟುಹೋದುದು ನನಗೆಷ್ಟೋ ಒಳ್ಳೆಯದಾಯಿತು. ಅದು ದೂರದೃಷ್ಟಿಯುಳ್ಳ ಮಂತ್ರಿ. ಉಳಿದವರೆಲ್ಲಾ ಮಂದಬುದ್ಧಿಯ ಮತಿಹೀನರು. ಆದ್ದರಿಂದಲೇ ನನ್ನನ್ನು ಚೆನ್ನಾಗಿ ನಂಬಿಬಿಟ್ಟಿದ್ದಾರೆ. ನನ್ನ ಯೋಜನೆಯನ್ನು ಹಾಳುಮಾಡುವವನು ಆ ರಕ್ತಾಕ್ಷಿಯೊಬ್ಬನೇ. ಉಳಿದವರಿಂದ ಯಾವ ತಡೆಯೂ ಬಾರದು. ಈಗ ನಾನು ನಿಶ್ಚಯವಾಗಿ ಈ ದುರ್ಗವನ್ನೂ, ರಾಜನನ್ನೂ ಮಂತ್ರಿಗಳನ್ನೂ ಕೊನೆಮುಟ್ಟಿಸಿಬಿಡಬಹುದು. ದೂರದೃಷ್ಟಿಯುವರಾದ ಹಿತಚಿಂತಕ ಮಂತ್ರಿಗಳನ್ನು ದೂರಮಾಡಿಕೊಂಡು. ಮೂಢರ ಮಾತುಗಳನ್ನು ಕೇಳುವ ರಾಜನು ಖಂಡಿತಾ ನಾಶವಾಗುವನು. ಆದುದರಿಂದ ಇನ್ನು ನನಗೆ ಜಯವಾಗುವುದರಲ್ಲಿ ಸಂದೇಹವೇನಿಲ್ಲ." ಎಂದುಕೊಂಡಿತು ರಕ್ತಾಕ್ಷಿ.

ಕಾಲ ಹೊಂಚುಹಾಕಿ ಒಂದು ದಿನ ಗುಹೆಯೊಳಗೆ ಬೆಂಕಿ ಹಚ್ಚಿ ಅದರೊಳಗಿದ್ದ ಗೂಗೆಗಳೆಲ್ಲವನ್ನೂ ನಿರ್ಮೂಲನ ಮಾಡುವ ಉದ್ದೇಶದಿಂದ ಒಣಗಿದ ಕಡ್ಡಿ ಕೋಲು ರೆಂಬೆ ಎಲೆಗಳನ್ನು ತಂದು ತನ್ನ ಗೂಡಿನಲ್ಲಿ ಸೇರಿಸಿಡತೊಡಗಿತು. ಅದು ಮಾಡುತ್ತಿರುವ ಈ ಕೆಲಸವನ್ನು ರಾಜನಾಗಲಿ, ಮಂತ್ರಿಯಾಗಲಿ, ಅವರ ಅನುಚರರಾಗಲಿ ಗಮನಿಸಲೇ ಇಲ್ಲ. ಅದೇನೋ ತನ್ನ ಸ್ಥಳ ಬೆಚ್ಚಗಿಡಲು ಹಾಗೆಲ್ಲಾ ಮಾಡುತ್ತದೆ ಎಂದುಕೊಂಡವು. ಸ್ಥಿರಜೀವಿ ಕಾಗೆಯ ಸ್ನೇಹದ ರೀತಿಯ ಮೇಲೆ ಅವುಗಳಿಗೆಲ್ಲ ಅಮಿತ ವಿಶ್ವಾಸವಿತ್ತು.

ಗುಹೆಯೊಳಗಿರುವ ಎಲ್ಲಾ ಗೂಗೆಗಳ ಮನೆಗಳನ್ನೂ ಸುಟ್ಟುಹಾಕಲು ಸಾಕಾಗುವಷ್ಟು ಉರುವಲುಗಳು ಸೇರಿದ ಮೇಲೆ, ಒಂದು ದಿನ ಬೆಳಗ್ಗೆ ಸ್ಥಿರಜೀವಿ ಹಾರಿ ಹೋಗಿ ಕಾಗೆರಾಜ ಮೇಘವರ್ಣದೊಂದಿಗೆ "ಮಹಾರಾಜ! ಶತ್ರುವಿನ ಕೋಟೆಯೊಳ



ಗೆಲ್ಲಾ ಸುಟ್ಟು ನಾಶ ಮಾಡಲು ಎಲ್ಲವನ್ನೂ ಸಿದ್ಧ ಮಾಡಿದ್ದೇನೆ. ನೀವೂ ನಿಮ್ಮ ಅನುಚರರೂ ತಲಾ ಒಂದೊಂದು ಉರಿಯುವ ಕೊಳ್ಳಿಯನ್ನು ತಂದು ನನ್ನ ಗೂಡಿನ ಮೇಲೆ ಹಾಕಿಬಿಡಿ. ಅದರ ತುಂಬಾ ಒಣಗಿದ ಉರುವಲುಗಳಿವೆ. ಎಲ್ಲಾ ಗೂಗೆಗಳ ಮನೆಗೂ ಸಂಬಂಧ ಕಲ್ಪಿಸಿದ್ದೇನೆ. ನಿಮ್ಮ ಶತ್ರುಗಳೆಲ್ಲಾ ಆ ಬೆಂಕಿಯಲ್ಲಿ ಸಿಕ್ಕಿಕೊಂಡು ಸುಟ್ಟು ಬೂದಿಯಾಗುತ್ತಾರೆ" ಎಂದಿತು.

ಆ ಮಾತು ಕೇಳಿ ಮೇಘವರ್ಣವು ಸಂತೋಷಪಟ್ಟು, "ಅಯ್ಯಾ, ನಿನ್ನ ಸಮಾಚಾರ ಪೂರಾ ಹೇಳು. ನಾವು ಕಲೆತುಕೊಂಡು ಬಹಳ ಕಾಲವಾಯಿತು." ಎಂದಿತು.

"ಈಗ ಬೇಡಪ್ಪಾ. ಇದು ಮಾಡುವ ಸಮಯವೇ ಹೊರತು ಮಾತಾಡುವ ಸಮಯವಲ್ಲ. ಶತ್ರುವಿನ ಗೂಢಚಾರರು ನಾನಿಲ್ಲಿಗೆ ಬರುವುದನ್ನು ಕಂಡು ಹಿಡಿದು, ನನ್ನ ಯೋಜನೆಯನ್ನು ಭಗ್ನ ಮಾಡಿಬಿಡಲಿಕ್ಕೂ ಸಾಕು. ಗೂಗೆಗಳು ಅಲ್ಲಿಂದ ತಪ್ಪಿಸಿಕೊಂಡು ಹೋದರೆ ಮತ್ತೆ ಅವಕಾಶ ಸಿಗಲಾರದು. ನಿನ್ನ ಶತ್ರುಗಳೆಲ್ಲಾ ಸತ್ತು ನೀನು ಜಯಶಾಲಿಯಾಗಿ ತಿರುಗಿ ಬಂದ ಮೇಲೆ ಸಾವಧಾನವಾಗಿ ಎಲ್ಲಾ ಕಥೆಯನ್ನೂ ಹೇಳುತ್ತೇನೆ. ಈಗ ಹೆಚ್ಚು ಮಾತಾಡದೆ ನಾನು ಹೇಳಿದಷ್ಟು ಮಾಡಿಬಿಡು." ಎಂದಿತು ಸ್ಥಿರಜೀವಿ.

ಕೂಡಲೇ ಮೇಘವರ್ಣವೂ ಅವನ ಅನುಚರರೂ ತಲಾ ಒಂದೊಂದು ಉರಿಯುವ ಕೊಳ್ಳಿಯನ್ನು ಕೊಕ್ಕಿನಲ್ಲಿ ಹಿಡಿದುಕೊಂಡು, ಗೂಗೆಗಳ ಗುಹೆಯ ಕಡೆಗೆ ಹಾರುತ್ತಾ ಹೋಗಿ, ಒಣ ಉರುವಲು ಒಟ್ಟಲ್ಪಟ್ಟಿದ್ದ ಸ್ಥಿರಜೀವಿಯ ಗೂಡಿನ ಮೇಲೆ ಹಾಕಿದುವು. ಒಮ್ಮೆಗೇ ದೊಡ್ಡ ದೊಡ್ಡ ಉರಿಗಳೆದ್ದು ಹೊಗೆಹರಡಿ ಒಳಗೆ ಸಿಕ್ಕಿಕೊಂಡ ಗೂಗೆಗಳೆಲ್ಲ ಚೀರಾಡಿ ಕೂಗಾಡಿ ನರಕ ಯಾತನೆ ಅನುಭವಿಸುತ್ತಾ ಬೆಂಕಿಯಲ್ಲಿ ಸುಟ್ಟು ನಾಶವಾದುವು.

ತರುವಾಯ ಮೇಘವರ್ಣವು ವಿಜಯ ಗರ್ವದಿಂದ ಸಿಂಹಾಸನದ ಮೇಲೆ ಅಧಿಷ್ಠಿಸಿಕೊಂಡು, "ಈಗ ನಿನ್ನ ಅನುಭವಗಳನ್ನು ಹೇಳು" ಎಂದು ಸ್ಥಿರಜೀವಿಯನ್ನು ಕೇಳಿತು.

ಸ್ಥಿರಜೀವಿ ಹೀಗೆಂದಿತು: "ನಾನು ದಿನಾ ಆ ಗೂಗೆ ರಾಜನಿಗೆ ಒಂದು ಡೊಗ್ಗು ಸಲಾಮು ಹಾಕುತ್ತಿದ್ದೆ" ಎಂದುದನ್ನು ಕೇಳಿ ಮೇಘವರ್ಣವು, "ಆಶ್ಚರ್ಯವಾಗಿದೆಯಲ್ಲಾ! ನಿನ್ನಂಥವನು ಆ ಹಾಳು ಗೂಗೆಗೆ ನಮಸ್ಕಾರ ಮಾಡುವುದೇ!" ಎಂದಿತು.

"ಕಾರ್ಯವಾಗಬೇಕಾದರೆ ಕತ್ತೆಯ ಕಾಲಿಗೂ ಬೀಳಬೇಕು ಎನ್ನುತ್ತಾರಷ್ಟೆ? ಅರ್ಜುನನಂಥವನು ರವಿಕೆ ತೊಟ್ಟುಕೊಳ್ಳಲಿಲ್ಲವೆ? ಭೀಮನು ಅಡಿಗೆ ಮಾಡಲಿಲ್ಲವೇ? ಯುಧಿಷ್ಠಿರನು ಒಬ್ಬ ಬಡಬ್ರಾಹ್ಮಣನಾಗಲಿಲ್ಲವೇ? ನಕುಲಸಹದೇವರು ಪಶುಪಾಲಕರಾಗಲಿಲ್ಲವೇ?" ಎಂದಿತು ಸ್ಥಿರಜೀವಿ. "ಏನಾಶ್ಚರ್ಯ! ನೀನು ಮಾಡಿದುದು ಕತ್ತೆಯ ಅಲಗಿನಲ್ಲಿ ನಡೆ

ಮುವ ಕೆಲಸ" ಎಂದಿತು ಮೇಘವರ್ಣ. "ಅದಕ್ಕೆ ಸಂದೇಹವೇನಿಲ್ಲ. ಆದರೆ ರಕ್ತಾಕ್ಷಿ ಹೊರಟು ಹೋದ ಮೇಲೆ ನನ್ನ ಕೆಲಸ ಬಹಳ ಸುಲಭ ವಾಯಿತು. ಉಳಿದವರೆಲ್ಲ ಮೂಢರು. ಅಂಥವ ರನ್ನು ವಂಚಿಸುವುದು ಬಹಳ ಸುಲಭ. ಮೂಢರನ್ನು ಮೆಚ್ಚಿಕೋ, ತಿಂಡಿಪೋತರನ್ನು ಚೆನ್ನಾಗಿ ಮೇಯಿಸು, ಲೋಭಿಗಳಿಗೆ ಬಹುಮಾನ ಕೊಡು. ದರಿದ್ರರಿಗೆ ಸಾಲ ಕೊಡು, ವಿದ್ವಾಂಸನಿಗೆ ಗ್ರಂಥಗಳನ್ನು ಕೊಡು, ರಾಜನ ಮೇಲೆ ವಿಧೇಯನಾಗಿರು, ನಿನ್ನ ಕೆಲಸ ನೆರವೇರುತ್ತದೆ. ಅದೆಲ್ಲ ಸ್ವಲ್ಪ ಕಾಲದ ವರೆಗೆ ಮಾತ್ರ. ಮಂದವಿಸರ್ಪ ಎಂಬ ಹಾವು ಕಪ್ಪೆಗಳನ್ನು ಹೊತ್ತು ಕೊಂಡ ಹಾಗೆ ಆ ಮೂಢರಿಗೇ ತಲೆ ಬಾಗಿಕೊಂಡಿರ ಬೇಕಾಗುತ್ತದೆ." ಎಂದಿತು ಸ್ಥಿರಜೀವಿ.

"ಅದೇನು ಕಥೆ?" ಎಂದು ಮೇಘವರ್ಣವು ಕೇಳಲು, ಸ್ಥಿರಜೀವಿ ಹೀಗೆಂದಿತು:

ಮಂದವಿಸರ್ಪ ಎಂಬ ಹಾವು ಮುದಿಯಾಗಿ ಹೋಗಿ, ಹೇಗೆ ಬದುಕುವುದೆಂಬ ಆಲೋಚನೆಗೆ ಬಿತ್ತು, ಅದು ಒಂದು ಕಪ್ಪೆಗಳ ಮಡುವಿನ ಹತ್ತಿರ ತಲೆ ತುಂಬಾ ಚಿಂತೆ ಹೊತ್ತ ಹಾಗೆ ನಟಿಸಿಕೊಂಡಿತ್ತು.

ಅದನ್ನು ನೋಡಿ ಒಂದು ಕಪ್ಪೆ ನೀರಿನ ಬದಿಗೆ ಬಂದು, "ಮಾವಾ! ಈ ದಿನ ಬೇಟೆಗೆ ಹೋಗ ಲಿಲ್ಲವೇಕೋ?" ಎಂದು ಕೇಳಿತು.

"ಅಪ್ಪಾ, ನನ್ನಂಥ ದೌರ್ಭಾಗ್ಯದವನಿಗೆ ತಿಂಡಿ ಗಿಂಡಿ ಏತಕ್ಕೆ ಹೇಳು? ನಿನ್ನೆ ರಾತ್ರಿ ತಿಂಡಿ ಹುಡುಕುತ್ತಾ ಹೋಗಿ ಒಂದು ಕಪ್ಪೆಯನ್ನು ನೋಡಿ, ಅದನ್ನು ಹಿಡಿಯಲು ಹೋದೆ. ಅದು ತಪ್ಪಿಸಿ ಕೊಂಡು ಮಡುವಿಗೆ ಧುಮುಕಿತು. ಅಲ್ಲಿ ನೀರಿನ ಬದಿಯಲ್ಲಿ ಕೆಲ ಮಂದಿ ಬ್ರಾಹ್ಮಣರು ಮಂತ್ರಪಠನೆ ಮಾಡಿಕೊಂಡಿದ್ದರು. ನಾನು ಒಬ್ಬ ಬಾಲಕನ ಕಾಲನ್ನು ನೋಡಿ, ಕಣ್ಣು ಸರಿಯಾಗಿ ಕಾಣದೆ ಕಪ್ಪೆ ಎಂದು ಕೊಂಡು ಕಚ್ಚಿಬಿಟ್ಟೆ. ಆ ಬಾಲಕ ಕೂಡಲೇ ಸತ್ತ. ಅವನ ತಂದೆ ನನ್ನನ್ನು ನೋಡಿ, ಅನ್ಯಾಯವಾಗಿ ನನ್ನ ಮಗನನ್ನು ಕೊಂದೆಯಲ್ಲಾ! ಇನ್ನು ಮೇಲೆ ನಿನ್ನ ಜನ್ಮ ಪೂರಾ ಕಪ್ಪೆಗಳನ್ನು ಹೊತ್ತುಕೊಳ್ಳುವ ಕೆಲಸವೇ ಆಗಲಿ! ಎಂದು ಶಪಿಸಿಬಿಟ್ಟ. ಆದುದರಿಂದ ಪಾಪ ಪರಿಹಾರಕ್ಕಾಗಿ ನಿಮ್ಮನ್ನೆಲ್ಲಾ ಹೊತ್ತುಕೊಳ್ಳೋಣ ಅಂತ ಬಂದಿದ್ದೇನೆ" ಎಂದಿತು ಹಾವು.

ಈ ವಾರ್ತೆ ಕಪ್ಪೆಗಳಿಗೆಲ್ಲಾ ಗೊತ್ತಾಯಿತು. ಅವು ಗಳು ಸಂತೋಷದಿಂದ ಹಾವಿನ ಬೆನ್ನಿನ ಮೇಲೆ ಸವಾರಿ ಮಾಡಲು ಬಂದುವು. ಅದರ ಹೆಡೆಯ ಹತ್ತಿರ ಕಪ್ಪೆರಾಜ ಜಾಲಪಾದನೂ, ತರುವಾಯ ಮಂತ್ರಿಗಳೂ, ಅವರ ನಂತರ ಇತರ ಪದವಿಗಳ ಕಪ್ಪೆಗಳೂ ಸಾಲಾಗಿ ಕುಳಿತುವು. ಕಪ್ಪೆಗಳಿಗಾದ ಆನಂದಕ್ಕೆ ಎಣೆಯೇ ಇಲ್ಲ.



# ೧೯೭. ಕಲ್ಲೆದೆಯ ವೀರ

ಪ್ರಪಂಚದಲ್ಲಿ ಮೊತ್ತ ಮೊದಲಿನ ನಾಗರಿಕತೆ ಎನಲ್ಪಡುವ ಸುಮೇರಿಯನ್ ನಾಗರೀಕತೆಯನ್ನು ಕ್ರಿ. ಪೂ. ೨,೦೦೦ದ ಅನಂತರ ಬಾಬಿಲೋನಿಯನ್ನರು ಜಯಿಸಿದರು. ತರುವಾಯ ೩೦೦ ವರ್ಷಗಳಲ್ಲಿ "ಕಾಸ್ಸೈಟ್" ಜಾತಿಯವರು ಬಾಬಿಲೋನಿಯನ್ನರನ್ನು ಸೋಲಿಸಿ ಸುಮಾರು ೬೦೦ ವರ್ಷ ಪಾಲಿಸಿದರು. ಮೊದಲು ಬಾಬಿಲೋನಿಯನ್ನರಿಗೆ ಬಾಗಿಕೊಂಡಿದ್ದ ಅಸಿರಿಯನ್ನರು ಕಾಸ್ಸೈಟರನ್ನು ಸೋಲಿಸಿ ಒಂದು ಸಾಮ್ರಾಜ್ಯ ಸ್ಥಾಪಿಸಿದರು.

ಅಸಿರಿಯನ್ನರು ವೀರರಿದ್ದಷ್ಟೂ ಕ್ರೂರರು. ಅಸಿರಿಯನ್ ಸಾಮ್ರಾಜ್ಯವನ್ನು ವಿಸ್ತರಿಸಿದ ಎರಡನೇ ಸಾರ್ಗಾನ ನಂತಹ ರಾಜರು ಮಹಾವೀರರ ಶ್ರೇಣಿಯವರಾಗುವರು. ಅವರಲ್ಲಿ ಕಟ್ಟಕಡೆಯವನು ಅಸುರ್ ಬನಿಪಾಲ್. ಇವನು ಕ್ರಿ. ಪೂ. ೬೬೮–೬೨೭ ವರೆಗೆ ಪಾಲಿಸಿದನು. ಅವನ ಪ್ರತಾಪಕ್ಕೆ ತಾಳಲಾರದೆ ಅನೇಕ ಮಂದಿ ರಾಜರು ತಮ್ಮ ಕುಮಾರಿಯರನ್ನು ಅವನ ಉಪಪತ್ನಿಯರಾಗುವಂತೆ ಅರ್ಪಿಸಿದರು. ಅವನು ಯುದ್ಧಗಳಲ್ಲಿ ಯಾವಾಗಲೂ ಸೇನೆಗಳಿಗೆ ಮುಂದೆಯೇ ಇರುತ್ತಾನೆ. ಚಿತ್ರದಲ್ಲಿ ಅವನು ಬೇಟೆಗೆ ಹೋಗುವಂತಿದೆ. ಇವನ ಅನಂತರ ೧೫ ವರ್ಷಗಳಲ್ಲಿ ಅಸಿರಿಯಾ ಸಾಮ್ರಾಜ್ಯ ವಿಚ್ಛಿನ್ನವಾಯಿತು.





# ಸನ್ಯಾಸಿಯ ವರ

ಧರಣಿಯೇ ಬೆರಗಾಗುವಂತಹ ಸಹನೆಯ ಪುಂಜನಾದ ತ್ರಿವಿಕ್ರಮನು ಮರದ ಬಳಿಗೆ ಹಿಂತಿರುಗಿಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ಭುಜದ ಮೇಲೆ ಹಾಕಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ರಾಜಾ, ಪಾತ್ರವರಿತು ದಾನ ಮಾಡಬೇಕು ಎನ್ನುತ್ತಾರೆ. ಆದರೆ ಒಂದೊಂದು ಸಾರಿ ಸರಿಯಾದ ಸತ್ಪಾತ್ರರಾದವರಿಗೂ ದಾನಗಳು ಕೂಡಿ ಬರುವುದಿಲ್ಲ. ಅದಕ್ಕೆ ನಿದರ್ಶನವಾಗಿ ನಿನಗೆ ಮಣಿಗುಪ್ತನ ಕಥೆಯನ್ನು ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕಥೆ ಕೇಳುತ್ತಾ ನಡೆ" ಎಂದು ಈ ರೀತಿಯಾಗಿ ಕಥೆಯನ್ನು ಹೇಳಲು ತೊಡಗಿತು :

ಪೂರ್ವ ಕಾಲದಲ್ಲಿ ದೊಡ್ಡ ದೊಡ್ಡ ಸಿದ್ಧಿಗಳನ್ನು ಸಾಧಿಸಿದ ಒಬ್ಬ ಸನ್ಯಾಸಿ ತನ್ನ ಶಿಷ್ಯರೊಂದಿಗೆ ಒಂದು ನಗರಕ್ಕೆ ಬಂದನು. ಆ ನಗರದಲ್ಲಿ ಮಣಿಗುಪ್ತನೆಂಬ ದೊಡ್ಡ ಶ್ರೀಮಂತನಿದ್ದನು. ಅವನು ಮಾಡುವ ದಾನ ಧರ್ಮಗಳಿಂದಾಗಿ ಅವನಿಗೆ ಅಪರದಾನಕರ್ಣನೆಂದು ಹೆಸರು ಬಂದಿತ್ತು.

---

**ಬೇತಾಳಕಥೆಗಳು?...**

---

ಸನ್ಯಾಸಿ ಆ ಮಣಿಗುಪ್ತನ ಮನೆಗೆ ಹೋದನು. ಮಣಿಗುಪ್ತನು ಸನ್ಯಾಸಿಯನ್ನು ತುಂಬಾ ಗೌರವದಿಂದ ಆದರಿಸಿ ಉಪಚರಿಸಿ ಅತಿಥಿಸತ್ಕಾರ ಮಾಡಿದನು. ಅಲ್ಲಿ ಒಂದುಕಡೆ ಮಣಿಗುಪ್ತನ ದಾನವನ್ನು ಸ್ವೀಕರಿಸಲು ಸಾವಿರಾರು ದರಿದ್ರರು ಸಾಲುಸಾಲಾಗಿ ನಿಂತಿದ್ದರು. ಮಣಿಗುಪ್ತನ ಜನರು ಪ್ರತಿ ಒಬ್ಬರಿಗೂ ಹಣವನ್ನು ಕೊಡುತ್ತಿದ್ದರು.

ಸನ್ಯಾಸಿ ಧನವಂತನ ಆತಿಥ್ಯವನ್ನು ಸ್ವೀಕರಿಸಿ ಹೊರಡುವ ಸಮಯದಲ್ಲಿ ಅವನನ್ನು ಕುರಿತು, "ನಿನ್ನ ಆತಿಥ್ಯವನ್ನು ತುಂಬಾ ಮೆಚ್ಚಿದೆನು. ನಿನ್ನ ದಾತೃತ್ವವನ್ನೂ ಕಣ್ಣಾರೆ ನೋಡಿದೆನು. ನೀನು ಏನಾದರೂ ಒಂದು ವರವನ್ನು ಕೇಳು, ಕೊಡುತ್ತೇನೆ. ಆದರೆ ನೀನು ಕೇಳುವ ವರವು ನಿಷ್ಕಲ್ಮಷವಾಗಿದ್ದರೇನೇ ನೆರವೇರುತ್ತದೆ" ಎಂದನು.

ಮಣಿಗುಪ್ತನು ವಿನಯದಿಂದ, "ಮಹಾಪ್ರಸಾದ! ನನ್ನ ಜೀವಿತಾಂತದ ವರೆಗೂ ಅವಿರಾಳವಾಗಿ ದಾನ ಧರ್ಮ ಮಾಡಲು ಕರಗದ ಸಂಪತ್ತು ಇರುವ ಹಾಗೆ ವರ ಕೊಡಿರಿ" ಎಂದನು.

ಸನ್ಯಾಸಿ ಮುಗುಳು ನಕ್ಕು ತಲೆಯಾಡಿಸಿ ತನ್ನ ಶಿಷ್ಯರೊಂದಿಗೆ ಹೊರಟು ಹೋಗಿಬಿಟ್ಟನು.

ದಾರಿಯಲ್ಲಿ ಮುಖ್ಯ ಶಿಷ್ಯನು ಸನ್ಯಾಸಿಯನ್ನು ನೋಡಿ, "ಗುರುಗಳೇ, ನೀವು ಮಣಿಗುಪ್ತನಿಗೆ ಕೊಟ್ಟ ವರವು ದಕ್ಕಿದೆಯೇ?" ಎಂದು ಕೇಳಿದನು. "ದಕ್ಕಲಿಲ್ಲ" ಎಂದನು ಸನ್ಯಾಸಿ.

ಮುಂದೆ ಕೆಲವು ತಿಂಗಳಲ್ಲಿ ಪರಿಸ್ಥಿತಿ ಪ್ರತಿಕೂಲಕ್ಕೆ ತಿರುಗಿ, ಮಣಿಗುಪ್ತನು ತನ್ನ ಸರ್ವಸ್ವವನ್ನೂ ಕಳೆದುಕೊಂಡು ದರಿದ್ರನಾಗಿ ದಾನಧರ್ಮ ಮಾಡುವುದನ್ನು ನಿಲ್ಲಿಸಿಬಿಟ್ಟನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಸನ್ಯಾಸಿ ಕೊಟ್ಟ ವರವು ಏಕೆ ಫಲಿಸಲಿಲ್ಲ? ಅವನಿಗೆ ನಿಜಕ್ಕೂ ವರ ಕೊಡುವ ಶಕ್ತಿ ಇರಲಿಲ್ಲವೇನು? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದು ಕೂಡಾ ಹೇಳದೇ ಹೋದರೆ ನಿನ್ನ ತಲೆ ಒಡೆದುಹೋಗುತ್ತದೆ!" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಮಣಿಗುಪ್ತನು ನಿಷ್ಕಲ್ಮಷವಾಗಿ ವರ ಕೇಳುವವನಾಗಿದ್ದರೆ ತನ್ನ ನಗರದಲ್ಲಿ ದರಿದ್ರರಿಲ್ಲದಂತೆ ಮಾಡಬೇಕೆಂದು ವರ ಕೇಳಬೇಕಿತ್ತು. ದಾತನೆಂಬ ತನ್ನ ಕೀರ್ತಿಯೂ ಧನವೂ ಚಿರಸ್ಥಾಯಿಯಾಗಿರಬೇಕೆಂಬುದನ್ನು ವರವಾಗಿ ಕೇಳಿದ್ದಾನೆ. ಅದು ನಿಷ್ಕಲ್ಮಷವಾದ ಕೋರಿಕೆಯಲ್ಲ. ಅದಕ್ಕೇ ವರವು ಸಿದ್ಧಿಸಲಿಲ್ಲ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.





# ನರಬಲಿ

ಪರೋಪಕಾರಿ ಚಿನ್ನಪ್ಪನು ತನ್ನ ನಾಯಿಯೊಂದಿಗೆ ಪ್ರಯಾಣ ಮಾಡುತ್ತಾ ಒಂದಾನೊಂದು ಗುಡ್ಡಗಾಡು ಪ್ರದೇಶದಲ್ಲಿ ನಡೆಯುತ್ತಿದ್ದನು. ಆಗ ಕೆಲಮಂದಿ ಕಾಡುಜಾತಿಯವರು ಡಕ್ಕೆ ಬಾರಿಸುತ್ತಾ ಪೀಪೀ ಧ್ವನಿಸುತ್ತಾ, ಸಿಳ್ಳು ಹಾಕುತ್ತಾ ದೊಡ್ಡ ಗುಂಪಾಗಿ ಅವನಿಗೆ ಇದಿರಾಗಿ ಬರುತ್ತಿದ್ದರು.

ಗುಂಪಿನ ನಡುವೆ ಕೋಣಗಳನ್ನು ಕಟ್ಟಿದ ಗಾಡಿಯ ಮೇಲೆ ಒಬ್ಬ ಮನುಷ್ಯನನ್ನು ನಿಲ್ಲಿಸಿಟ್ಟು ಒಂದು ಕಂಬಕ್ಕೆ ಬಿಗಿಯಲಾಗಿತ್ತು. ಅವನ ಹಣೆಯಲ್ಲಿ ಬೆಂಕಿಯ ಉಂಡೆಯಂತಹ ಕುಂಕುಮ ಬೊಟ್ಟು, ಎದೆಯಲ್ಲಿ ಕೆಂಪುಹೂಗಳ ಮಾಲೆ. ಅವನ ಮುಖದಲ್ಲಿ ಸಾವಿನ ಕಳೆ ಸ್ಪಷ್ಟವಾಗಿತ್ತು. ಆ ನಿರ್ಭಾಗ್ಯನನ್ನು ಬಲಿಕೊಡಲು ಕೊಂಡೊಯ್ಯುತ್ತಿದ್ದಾರೆಂದು ಚಿನ್ನಪ್ಪನಿಗೆ ತಿಳಿಯಿತು. ಅವನ ಅವಸ್ಥೆಯನ್ನು ನೋಡಿ ಚಿನ್ನಪ್ಪನಿಗೆ ಮನಸ್ಸು ಕರಗಿತು. ಕಾಡುಜಾತಿಯವರ ಆಚಾರಗಳು ಬಹಳ ಅಮಾನುಷವಾಗಿರುತ್ತವೆಂದು ಅವನು ಕೇಳಿದ್ದನು.

ಚಿನ್ನಪ್ಪ ಸ್ವಲ್ಪ ಆಲೋಚಿಸಿ ಗುಂಪಿನ ಹಿಂದೆ ನಡೆಯುತ್ತಿದ್ದ ಒಬ್ಬಳು ಮುದುಕಿಯನ್ನು ಮಾತಾಡಿಸಿ "ಏನು ಈ ಗುಂಪು?" ಎಂದು ಕೇಳಿದನು. ಮುದುಕಿ ದೂರದಲ್ಲಿ ಕಾಣುವ ಕೇರಿಯನ್ನು ತೋರಿಸಿ, "ಅದೇ ನಮ್ಮ ಕೇರಿ. ಆ ಗುಡ್ಡದ ಮೇಲೆ ಪೋಲೇರಮ್ಮನ ಗುಡಿ ಇದೆ. ಆ ಅಮ್ಮ ಅಲ್ಲಿಗೆ ಬಂದು ನಾಲ್ಕು ವರ್ಷ ಆಯಿತು. ಪ್ರತಿವರ್ಷ ತನಗೆ ಒಬ್ಬ ಗಂಡು ಮನುಷ್ಯನನ್ನೂ, ಒಂದು ಜತೆ ಕೋಣಗಳನ್ನೂ ಬಲಿಕೊಡಬೇಕೆಂದು ಅವಳ ಆಜ್ಞೆಯಾಗಿದೆ. ಆ ಅಮ್ಮನ ಮೈಮೆ ತುಂಬಾ ದೊಡ್ಡದು. ಕಳೆದ ವರ್ಷ ಮನುಷ್ಯನ್ನ ಬಲಿ ಕೊಡದೇ ಹೋದದ್ದಕ್ಕೆ ಮಳೆಬಾರದೆ ಊರೆಲ್ಲ ಒಣಗಿ ಜನ ಸಾಯತೊಡಗಿತು. ಕುರಿಟಗರನ್ನು ಬಲಿಕೊಡ್ತೇವೇ ಅಂತ ಹರಿಕೇ ಹೇಳಿಕೊಂಡ ಜೋಗಪ್ಪ ಮಾತು ತಪ್ಪಿದ್ದಕ್ಕೆ ರಕ್ತ ವಾಂತಿ ಮಾಡಿ ಸತ್ತ. ಈಗ ನಮ್ಮ ಅರ್ಚಕ ಬೈರವನೇ ಸ್ವಂತ ಕೈಯಿಂದ ನರಬಲಿ ಕೊಡುತ್ತಾನೆ. ದೇವಿ ಸಂತೋಷಪಡುತ್ತಾಳೆ, ನೀನೂ ನೋಡು, ಬಾರಪ್ಪ!" ಎಂದಳು.

ಚಿನ್ನಪ್ಪನು ಅವಳನ್ನು ನೋಡಿ, "ಆ ಮನುಷ್ಯನಿಗೆ ತಂದೇ ತಾಯಿ ಯಾರೂ ಇಲ್ಲವೇ? ಅವನನ್ನು ಹಸಿಹಸೀ ಬಲಿಕೊಟ್ಟರೆ ಅಳುವವರಾರೂ ಇಲ್ಲವೆ?"

ಬಿ. ಎನ್. ರಾವ್

ಎಂದು ಕೇಳಿದ. ಮುದುಕಿ ಮೂಗಿನ ಮೇಲೆ ಬೆರಳಿಟ್ಟು "ಒಳ್ಳೇ ಪ್ರಶ್ನೆ ಕೇಳಿದೆ ಬಿಡೂ! ಏಕೆ ಅಳು ತ್ತಾರೇ? ಹಾಗನ್ನುವುದೇ ತಪ್ಪು. ಅವನು ನನ್ನ ಮಗನೇ. ಅವನಿಗೇನು ಕಡಿಮೆ? ಮಹಾತಾಯಿ ಅವನನ್ನು ನೇರಾಗಿ ಸ್ವರ್ಗಕ್ಕೆ ಕಳುಹಿಸುತ್ತಾಳೆ" ಎಂದಳು.

ಚಿನ್ನಪ್ಪನಿಗೆ ನಗಬೇಕೋ ಅಳಬೇಕೋ ಗೊತ್ತಾಗ ಲಿಲ್ಲ. ಎಂತಹ ಮೂರ್ಖರಿವರು? ಹಡೆದ ತಾಯಿಯೇ ಮಗನನ್ನು ಬಲಿಕೊಡಲು ಕಳುಹಿಸು ತ್ತಿದ್ದಾಳಲ್ಲ! ಹೇಗಾದರೂ ಮಾಡಿ ಈ ಮಾರ್ಗದಿಂದ ಅವರನ್ನು ತಪ್ಪಿಸಬೇಕು. ಹೇಗೆ?

ಚಿನ್ನಪ್ಪನಿಗೆ ಮಿಂಚಿನಂತೆ ಒಂದು ಉಪಾಯ ಹೊಳೆಯಿತು. ಅವನು ಮೆರವಣಿಗೆಯನ್ನು ಮುಂದೆ ಹೋಗಲು ಬಿಟ್ಟು, ಕೇರಿಯ ಕಡೆಗೆ ಓಡಿಧನು.

ಅಲ್ಲಿ ಯಾರೂ ಇರಲಿಲ್ಲ. ಎಲ್ಲರೂ ಹೊರಟು ಹೋಗಿ ಮೆರವಣಿಗೆಯಲ್ಲಿ ಸೇರಿಕೊಂಡಿದ್ದರು. ಚಿನ್ನಪ್ಪನು ಒಂದು ಗುಡಿಸಲಿಗೆ ಬೆಂಕಿ ಹಚ್ಚಿ, ಮತ್ತೆ ಓಡುತ್ತಾ ಬಂದು ಮೆರವಣಿಗೆಯ ಗುಂಪಿನಲ್ಲಿ ಸೇರಿದನು. ಅವನು ಗುಡಿಸಲಿಗೆ ಬೆಂಕಿ ಹಚ್ಚಿದ ನೆಂದು ಒಂದು ಕಾಗೆಗೂ ಗೊತ್ತಾಗಲಿಲ್ಲ.

ಮೆರವಣಿಗೆ ಕುಣಿಯುತ್ತಾ ಕೇಕೇ ಹಾಕುತ್ತಾ, ಗುಡ್ಡದ ಮೇಲೆ ಹತ್ತಿ ಪೋಲೇರಮ್ಮನ ಗುಡಿಯನ್ನು ಮುಟ್ಟಿತು. ಪೋಲೇರಮ್ಮನ ವಿಗ್ರಹ ಗೋಳೀ ಕಣ್ಣುಗಳಿಂದ ಕೆಂಪಗೆ ಕರ್‍ರಗೆ ಭಯಂಕರವಾಗಿತ್ತು. ಎಲ್ಲರೂ ವಿಗ್ರಹದ ಸುತ್ತಲೂ ಪ್ರದಕ್ಷಿಣೆ ಮಾಡಿ ಗಾಡಿಯಲ್ಲಿ ನಿಲ್ಲಿಸಿ ಕಟ್ಟಲ್ಪಟ್ಟಿದ್ದ ಮನುಷ್ಯನನ್ನು ವಿಗ್ರಹದ ಮುಂದೆ ತಂದು ನಿಲ್ಲಿಸಿದರು.

ವಿಕೃತ ವೇಷದಲ್ಲಿದ್ದ ಭೈರವನೆಂಬ ಅರ್ಚಕನು ಅಗಲವಾದ ಕತ್ತಿಯನ್ನು ಎತ್ತಿ ಹಿಡಿದುಕೊಂಡು, ಕಣ್ಣು ಮುಚ್ಚಿ, ಏನೇನೋ ಮಂತ್ರಗಳನ್ನು ಉಚ್ಚರಿ ಸುತ್ತ ದೇವತೆ ಮೈಮೇಲೆ ಬಂದಂತೆ ಹಾಹೂ ಎನ್ನುತ್ತ ನಡುಗುತ್ತಿದ್ದನು. ಕತ್ತಿಯನ್ನೆತ್ತಿಕೊಂಡು ಹಿಂದೂ ಮುಂದೂ ಆಡುತ್ತಿದ್ದನು. ಚಿನ್ನಪ್ಪನು ಮೆಲ್ಲಗೆ ತನ್ನ ನಾಯಿಗೆ ಏನೋ ಸನ್ನೆ ಮಾಡಿದನು.



ಕೂಡಲೇ ಅದು ಅವನ ಹಿಂದಿನ ಬದಿಗೆ ಹೋಗಿ ಬೌ ಎಂದು ಬೊಗಳಿ ಅವನ ಮೇಲೆ ಹಾರಿ ಅವನ ಕತ್ತಿಯು ಕೈಯನ್ನು ಕಚ್ಚಿ ಹಿಂದಕ್ಕೆಳೆಯಿತು. ಅವನೂ ಇತರರೂ ಗಾಬರಿಯಾದರು. ಸಮಾಳಿಸಿ ಕೊಂಡು ಭೈರವನು "ಏನೋ ಅಪರಾಧ ನಡೆದಿರ ಬೇಕು" ಎಂದು ಕೂಗಿದನು.

ಕೂಡಲೇ ಚಿನ್ನಪ್ಪನು ಅವನಬಳಿಗೆ ಹೋಗಿ "ನಿಜ, ನಿಜ. ಸರಿಯಾಗಿ ಹೇಳಿದೆ. ಅದೇನು ಅಪರಾಧವೆಂಬುದನ್ನು ನಾನು ಹೇಳುತ್ತೇನೆ ಕೇಳು" ಎಂದು ಹೀಗೆ ವಿವರಿಸಿ ಹೇಳತೊಡಗಿದನು :

"ನಾನು ಮುತ್ತೂರಿನವನು. ಪೋಲೇರಮ್ಮ, ಮಾಲೇರಮ್ಮ, ಮಾರಮ್ಮ, ದುರಗಮ್ಮ, ಕಾಳಮ್ಮ ಇವರೆಲ್ಲ ಅಲ್ಲಿ ಹುಟ್ಟಿದ್ದಾರೆ. ಎಲ್ಲರಿಗಿಂತಲೂ ದೊಡ್ಡ ವಳು ಪೋಲೇರಮ್ಮನೇ. ಈವರೆವಿಗೂ ನಾವು ಆ ಪೋಲೇರಮ್ಮನಿಗೆ ಪ್ರತಿವರ್ಷ ನೂರೊಂದು ಮಂದಿ ಯನ್ನು ತಯಾರು ಮಾಡಿದೆವು. ಅವರಲ್ಲಿ ಒಬ್ಬ ಬ್ರಾಹ್ಮಣ ಇದ್ದ. ಬಲಿ ಕೊಡಲು ನೋಡುವಾಗ ಬ್ರಾಹ್ಮಣನು ಅರ್ಚಕ ಭೈರವನೊಂದಿಗೆ 'ಮುಂಚಿನ ರಾತ್ರಿ ಪೋಲೇರಮ್ಮ ನನ್ನನ್ನು ಮದುವೆ ಮಾಡಿ ಕೊಂಡಳು. ಅದ್ದರಿಂದ ಅವಳೀಗ ಬ್ರಾಹ್ಮಣ ಜಾತಿ ಯವಳಾದಳು. ಇನ್ನು ಅವಳು ಮಾಂಸ ಮುಟ್ಟುವು ದಿಲ್ಲ. ಅದ್ದರಿಂದ ಈ ನರಬಲಿಯನ್ನು ನಿಲ್ಲಿಸಿಬಿಡಿ, ತಪ್ಪಿದರೆ ಅನುಭವಿಸುವಿರಿ' ಎಂದನು.

"ಅವನ ಮಾತು ಕೇಳಿ ನಮ್ಮ ಅರ್ಚಕ ಭೈರವನು ನಕ್ಕುಅಣಕಿಸಿ, 'ನಿನ್ನ ಬುದ್ಧಿ ಮಂಕಾಯಿತು. ಪೋಲೇ ರಮ್ಮ ನಿನ್ನ ಹೆಂಡತಿಯೋ ? ಮಾಂಸ ತಿನ್ನೋ ದಿಲ್ಲವೇ ? ಹಾಗಾದರೆ ನಿನ್ನ ಮುಂದೆಯೇ ಅವಳಿಂದ ಮಾಂಸ ತಿನ್ನಿಸುತ್ತೇನೆ ನೋಡು' ಎಂದು ಒಬ್ಬ ಮನುಷ್ಯನನ್ನು ಬಲಿ ಕಡಿದು ಬಿಟ್ಟ. ರಕ್ತಹಾರಿ ಆ ಭೈರವನ ಕಣ್ಣಿಗೆ ಬಿತ್ತು. ಆಕಾಶದಲ್ಲಿ ಕಣ್ಣು ಕುರುಡಾಗುವಂಥ ಮಿಂಚು ! ಭೂಮಿ ಒಡೆದ ಹಾಗೆ ಸಿಡಿಲು ! ಅಷ್ಟೇ, ಎಲ್ಲರೂ ಮುಚ್ಚಿದ ಕಣ್ಣು ಬಿಡಿಸಿ ನೋಡಿದಾಗ ಆ ಭೈರವನು ನಾಯಿಯಾಗಿಬಿಟ್ಟಿದ್ದನು. ಆಕಾಶದಿಂದ ಬೆಂಕೀಕೆಂಡ ಸುರಿದು ಊರೆಲ್ಲಾ ಸುಟ್ಟು



ಹೋಯಿತು. ಹೇಗಾದರೂ ನಮ್ಮ ಭೈರವ ಅರ್ಚಕನ ನಾಯಿ ರೂಪ ಹೋಗಲಾಡಿಸಬೇಕೆಂದು ಅದನ್ನು ಕರೆದುಕೊಂಡು ನಾನು ತೀರ್ಥ ಯಾತ್ರೆಗೆ ಹೊರಟಿದ್ದೇನೆ. ಹಾಗೆಯೇ ಈ ದಾರಿಯಾಗಿ ಬಂದೆ.''

ಭೈರವನು ಚಿನ್ನಪ್ಪನನ್ನೂ, ನಾಯಿಯನ್ನೂ ಮಾರಿಸಿ ಮಾರಿಸಿ ನೋಡಿದನು. ಚಿನ್ನಪ್ಪನು ಅವನನ್ನು ನೋಡಿ ಮತ್ತೆ ಹೀಗೆಂದನು : ''ನೋಡಯ್ಯಾ ಭೈರವಾ ! ಬಲಿ ಕೊಡಬೇಡವೆಂದು ನಾನು ನಿನ್ನನ್ನು ಒತ್ತಾಯಿಸುವುದಿಲ್ಲ. ನೀನೂ ತನ್ನ ಹಾಗಿನವನೇ ಎಂಬ ಅಭಿಮಾನದಿಂದ ಈ ಶಾಪ ಪಡೆದ ಭೈರವ ನಾಯಿ ನಿನ್ನನ್ನು ರಕ್ಷಿಸಲು ಪ್ರಯತ್ನ ಮಾಡಿತು, ಅಷ್ಟೇ. ಏಕೆಂದರೆ ಪೋಲೇರಮ್ಮ ಸಾಮಾನ್ಯಳೇನಲ್ಲ. ಆ ಸಂಗತಿ ನಿನಗೂ ಗೊತ್ತಿದೆ. ಅವಳು ಚಿಕ್ಕಪ್ರಾಯದಲ್ಲಿಯೇ ಬ್ರಾಹ್ಮಣನನ್ನು ಹಿಡಿದು ನುಂಗಿದವಳು. ಆಗ ಬಂದ ಬ್ರಾಹ್ಮಣರ ಶಾಪದಿಂದತಾನೇ ಅವಳು ನರಬಲಿ ಬೇಕೆಂದು ಕೇಳಿದಳು ? ಈಗ ಬ್ರಾಹ್ಮಣನ ಹೆಂಡತಿಯಾಗಿ ಇನ್ನಿಷ್ಟು ಮೇಲಿನ ಅಂತಸ್ತಿಗೆ ಹೋಗಿದ್ದಾಳೆ.''

ಆ ಸಮಯದಲ್ಲಿ ಕೆಲವರು ಓಡುತ್ತಾ ಬಂದು ಕೇರಿಯಲ್ಲಿ ಗುಡಿಸಲುಗಳಿಗೆ ಬೆಂಕಿ ಬಿದ್ದ ಸಮಾಚಾರ ಹೇಳಿದರು. ಅಲ್ಲಿದ್ದ ಅನೇಕರು ತಮ್ಮ ಕೇರಿಯ ಕಡೆಗೆ ಓಡಿದರು. ಚಿನ್ನಪ್ಪನು ಹೇಳಿದುದಕ್ಕೂ, ನಡೆದುದಕ್ಕೂ ಸರಿಹೋಯಿತು. ಎಲ್ಲರಿಗೂ ಚಿನ್ನಪ್ಪನ ಮಾತಿನಲ್ಲಿ ನಂಬುಗೆ ಬಿದ್ದಿತು.

ಭೈರವನು ಕತ್ತಿಯನ್ನು ದೂರ ಬಿಸುಟು, ನಾಯಿಯ ಕಾಲಮುಂದೆ ಅಡ್ಡ ಬಿದ್ದು, ''ಅಣ್ಣಾ ! ನಿನ್ನ ಉಪಕಾರ ಎಂದಿಗೂ ಮರೆಯಲಾರೆ. ನಾಯಿಯ ರೂಪ ಬಾರದಂತೆ ನನ್ನನ್ನು ಕಾಪಾಡಿದೆ. ಇನ್ನು ಮೇಲೆ ಪೋಲೇರಮ್ಮನಿಗೆ ತೆಂಗಿನಕಾಯಿ ಕುಂಬಳಕಾಯಿಗಳನ್ನು ಮಾತ್ರ ಬಲಿಗೊಡುತ್ತೇನೆ. ನಾನು ಕೂಡಾ ಮಾಂಸ ತಿನ್ನುವುದನ್ನು ಬಿಟ್ಟೆ'' ಎಂದು ಪ್ರಮಾಣ ಮಾಡಿದನು.

ತರುವಾಯ ಚಿನ್ನಪ್ಪನೇ ಬಲಿಗೆ ನಿಂತ ನಿರ್ಭಾಗ್ಯನನ್ನು ಬೆನ್ನು ತಟ್ಟಿ ಮನೆಗೆ ಹೊರಡಿಸಿದನು. ಎಲ್ಲರೊಂದಿಗೆ ಚಿನ್ನಪ್ಪನು ಅವರ ಕೇರಿಗೆ ಹೋಗಿ ನೋಡಿದನು.

ಬೆಂಕಿಯಿಂದ ಬಹಳ ನಷ್ಟವೇನೂ ಆಗಿರಲಿಲ್ಲ. ಎರಡು ಗುಡಿಸಲುಗಳು ಸುಟ್ಟು ಹೋಗಿದ್ದುವು. ಸುಟ್ಟುಹೋದ ಮನೆಗಳನ್ನು ಮತ್ತೆ ಕಟ್ಟಿಕೊಳ್ಳಬಹುದಷ್ಟೆ ? ಸತ್ತುಹೋದ ಮನುಷ್ಯನನ್ನು ಮತ್ತೆ ಬದುಕಿಸಲು ಸಾಧ್ಯವೇ ? ಆದುದರಿಂದ ತಾನು ಮಾಡಿದ ಕೆಲಸಕ್ಕೆ ಚಿನ್ನಪ್ಪನು ಅಷ್ಟೇನೂ ಪಶ್ಚಾತ್ತಾಪ ಪಡಲಿಲ್ಲ.

ಆ ಮೇಲೆ ಅವನು ತನ್ನ ನಾಯಿಯೊಂದಿಗೆ ಆ ಪ್ರಾಂತದಿಂದ ಮುಂದೆ ಪ್ರಯಾಣ ಹೊರಟನು.





# ಪಿತೃದೃಷ್ಟಿ

ಒಂದು ಊರಿನಲ್ಲಿ ವಿಶ್ವನಾಥನೆಂಬ ಚಿಕ್ಕ ರೈತನಿದ್ದ. ಅವನು ಸಾಯುವುದಕ್ಕೆ ಮೊದಲು ತನ್ನ ಮನೆಯನ್ನೂ, ನಾಲ್ಕು ಎಕರೆ ಹೊಲವನ್ನೂ ಇಬ್ಬರು ಮಗಂದಿರಿಗೆ ಸಮನಾಗಿ ಹಂಚಿಕೊಟ್ಟನು. ಸಾಯುವ ಮೊದಲು ವಿಶ್ವನಾಥನು ತನ್ನ ಚಿಕ್ಕ ಮಗನೊಂದಿಗೆ, "ಅಪ್ಪಾ, ನಿನಗೇನು ಬೇಕಾದರೂ ಅಣ್ಣನನ್ನು ಕೇಳು. ಕಷ್ಟಕಾಲ ಬಂದಾಗ ನಿನ್ನ ಹೊಲದ ಈಶಾನ್ಯ ದಿಕ್ಕಿನಲ್ಲಿ ಬಾವಿ ತೋಡಿಕೋ" ಎಂದು ಹೇಳಿದ್ದನು.

ವಿಶ್ವನಾಥನು ತೀರಿಹೋದ ಮೇಲೆ ಅವನ ದೊಡ್ಡ ಮಗ ರಂಗನು ತನ್ನ ಹೊಲದಲ್ಲಿ ಶ್ರದ್ಧೆಯಿಂದ ದುಡಿಯುತ್ತಿದ್ದನು. ಅವನು ಒಳ್ಳೆಯ ಚುರುಕುತನವುಳ್ಳ ಶ್ರಮಜೀವಿಯಾದುದರಿಂದ, ಸಮಯವನ್ನು ಹಾಳು ಮಾಡುತ್ತಿದ್ದಿಲ್ಲ. ಆದುದರಿಂದ ಅವನಿಗೆ ಲಾಭಗಳು ಕೈಗೂಡುತ್ತಾ ಬಂದುವು. ಎರಡನೇ ಮಗ ತಿಮ್ಮನು ಚಿಕ್ಕಂದಿನಿಂದಲೇ ಸೋಮಾರಿಯಾಗಿದ್ದವನು. ಕೆಲಸಗಳಿಗೆ ಮೈ ಬಗ್ಗದವನು. ಕೇವಲ ಜಡಮಂದರಾಯ.

ಅಣ್ಣ ಅವನಿಗೆ ಹಾಗೆ ಮಾಡು, ಹೀಗೆ ಮಾಡು ಎಂದು ಬುದ್ಧಿ ಹೇಳಿದರೂ ಅವನು ಲಕ್ಷ್ಯಮಾಡಲಿಲ್ಲ. ಅವನ ಹೊಲದಲ್ಲಿ ಕಾಲಕಾಲಕ್ಕೆ ಮಾಡಬೇಕಾದ ಯಾವ ಕೆಲಸವನ್ನೂ ಮಾಡಲಿಲ್ಲ. ಸುಮ್ಮನೆ ತಿಂದು ತಿರುಗಿಯೇ ಕಾಲಕಳೆದನು. ಎಷ್ಟು ಹೇಳಿದರೂ ಪ್ರಯೋಜನವಿಲ್ಲದೆ ಹೋಗಲು, ರಂಗನೂ ಬೇಸತ್ತು ಸುಮ್ಮನಾಗಿಬಿಟ್ಟ.

ದಿನಗಳು ಕಳೆದು ರಂಗನ ಹೊಲವು ಹಚ್ಚಗೆ ಬಂಗಾರದಂಥ ಕದಿರುಗಳಿಂದ ಜೋಕಾಲಿಯಾಡುತ್ತಿರಲು, ತಿಮ್ಮನ ಹೊಲ ಬೀಡುಬಿದ್ದು ಭಣಭಣಿಸಿಕೊಂಡಿತ್ತು. ಅವನಿಗೆ ಅಣ್ಣನ ಹೊಲ ನೋಡಿ ಕಣ್ಣು ಚುಚ್ಚಿತು. ಅವನು ಅಣ್ಣನೊಂದಿಗೆ, "ಅಣ್ಣಾ, ನಿನ್ನ ಮಾತು ಕೇಳದೆ ಹೋದುದಕ್ಕೆ ದುಃಖವಾಗುತ್ತೆ. ಏನು ಮಾಡಲು ತೋರುವುದಿಲ್ಲ. ನನಗೆ ಬೇಸಾಯದ ಒಂದು ಮಣ್ಣೂ ಗೊತ್ತಿಲ್ಲವಲ್ಲಣ್ಣಾ. ದಯವಿಟ್ಟು ನೀನೇ ನನ್ನ ಹೊಲಗಳಲ್ಲಿ ಸ್ವಲ್ಪ ಸಾಗುವಳಿ ಮಾಡಿಕೊಡಣ್ಣಾ!" ಎಂದ ನಾಚಿಕೆಬಿಟ್ಟು.

ರಂಗನು ತಮ್ಮನ ಮೇಲಿನ ಪ್ರೀತಿಯಿಂದ ತಮ್ಮನ ಹೊಲವನ್ನು ಉತ್ತು, ಕೆಲಸ ಪ್ರಾರಂಭಿಸಿದ. ಎರಡು ದಿನಗಳ ಮೇಲೆ ತಿಮ್ಮನು "ಅಣ್ಣಾ, ನನ್ನ ಹೊಲ ನೀನು ತೆಗೆದುಕೊಂಡು ನಿನ್ನ ಹೊಲ ನನಗೆ

ಬಿ. ಅಚ್ಯುತರಾವ್

ಕೊಡು. ಉಳಿದ ಕೆಲಸ ಹೇಗಾದರೂ ನಾನು ನೋಡಿ ಕೊಳ್ಳುತ್ತೇನೆ" ಎಂದನು.

ಅದಕ್ಕೂ ರಂಗನು ಒಪ್ಪಿದ. ರಂಗನೂ ತಿಮ್ಮನೂ ತಮ್ಮ ತಮ್ಮ ಹೊಲಗಳನ್ನು ಬದಲಾಯಿಸಿ ಕೊಂಡರು. ಈಗ ರಂಗನು ತೆಗೆದುಕೊಂಡ ತಿಮ್ಮನ ಹೊಲಕ್ಕೆ ನೀರಿನ ಸದುಪಾಯ ಚೆನ್ನಾಗಿರಲಿಲ್ಲ. ಬಾವಿ ರಂಗನ ಭಾಗದಲ್ಲೇ ಇದ್ದಿತು. ಅದರ ನೀರು ತಿಮ್ಮನ ಹೊಲದ ಭಾಗಗಳ ವರೆಗೆ ಮುಟ್ಟಲು ಸಾಲದು. ಅದಕ್ಕೇ ತಂದೆ ತಿಮ್ಮನೊಂದಿಗೆ ಅಲ್ಲಿ ಬಾವಿ ತೋಡಬೇಕೆಂದು ಹೇಳಿದ್ದಾರೆ. ತಿಮ್ಮನಿಗೆ ವ್ಯವಸಾಯದ ಕೆಲಸಗಳಲ್ಲಿ ಆಸಕ್ತಿ ಇಲ್ಲವೆಂದು ತಿಳಿದೇ ಅವರು ಅವನಿಗೆ ನೀರಿಲ್ಲದ ಹೊಲವನ್ನು ಕೊಟ್ಟಿರಬೇಕು.

ಹೀಗೆ ನೆನೆದುಕೊಂಡು ರಂಗನು ತಂದೆ ಹೇಳಿದಂತೆ ಆ ಒಣ ಹೊಲದ ಈಶಾನ್ಯ ದಿಕ್ಕಿನಲ್ಲಿ ಬಾವಿ ತೋಡಲು ಉಪಕ್ರಮಿಸಿದನು. ಸುಮಾರು ಮೂರು ಗಜ ಹೊಂಡ ತೋಡಿದಾಗ ಒಂದು ಪಾತ್ರವು ಸಿಕ್ಕಿತು. ಅದರ ಬಾಯಿ ಗಟ್ಟಿಯಾಗಿ ಬಿಗಿದು ಭದ್ರ ಪಡಿಸಲ್ಪಟ್ಟಿತ್ತು.

ರಂಗನು ಆಶ್ಚರ್ಯಪಡುತ್ತ ಅದರ ಮುಚ್ಚಳವನ್ನು ತೆಗೆದು ನೋಡಿದನು. ಅದರಲ್ಲಿ ತುಂಬಾ ಬೆಳ್ಳಿ ನಾಣ್ಯಗಳಿದ್ದುವು. ಅದು ತಮ್ಮ ತಂದೆ ಜೀವಮಾನದಲ್ಲಿ ಕಷ್ಟಪಟ್ಟು ಉಳಿಸಿದ ಹಣವೆಂದು ರಂಗನಿಗೆ ಗೊತ್ತಾಯಿತು. ಯಾವ ಕೆಲಸವನ್ನೂ ಕಲಿಯದಿರುವ ತಿಮ್ಮನಿಗಾದರೂ ಅದು ದಕ್ಕಬೇಕೆಂಬ ಉದ್ದೇಶದಲ್ಲಿ ತಂದೆ ಅದನ್ನು ಆ ಸ್ಥಳದಲ್ಲಿ ಹುಗಿದಿಟ್ಟಿದ್ದಾರೆ. ಅದಕ್ಕೇ ಈ ಸ್ಥಳದಲ್ಲಿ ಬಾವಿ ತೋಡಬೇಕೆಂದು ಅವನಿಗೆ ಹೇಳಿದ್ದಾರೆ. ರಂಗನು ಕಾರ್ಯಸಾಮರ್ಥ್ಯವುಳ್ಳವನಾದುದರಿಂದ ಅವನಿಗೆ ತಂದೆ ಪ್ರತ್ಯೇಕ ಸದುಪಾಯ ಮಾಡಿರಲಿಲ್ಲ.

ತಂದೆಯ ಆಶಯವನ್ನು ನೆರವೇರಿಸಬೇಕೆಂದು ರಂಗನು ಆ ಧನವನ್ನು ತಿಮ್ಮನಿಗೇ ಕೊಡಲು ನಿರ್ಧರಿಸಿದನು. ಆ ದಿನ ಸಾಯಂಕಾಲ ಅವನು ಆ ಧನವನ್ನೆತ್ತಿಕೊಂಡು ತಿಮ್ಮನ ಮನೆಗೆ ಹೋದನು. ಆದರೆ ಅವನ ಆಶಯು ಈಡೇರಲಿಲ್ಲ.

ರಂಗನು ಹೊಲದಲ್ಲಿ ಬಾವಿ ತೋಡುತ್ತಿದ್ದಾಗ, ತಿಮ್ಮನು ತನ್ನ ಭಾಗದ ಮನೆಯನ್ನೂ, ಅಣ್ಣನಿಂದ ತೆಗೆದುಕೊಂಡ ಹೊಲವನ್ನೂ ಯಾರಿಗೋ ಮಾರಿ, ಆ ಹಣವನ್ನು ಕಟ್ಟಿಕೊಂಡು ಎಲ್ಲಿಗೋ ಹೊರಟು ಹೋಗಿದ್ದನು. ಹೊಲದ ಕೆಲಸಗಳನ್ನೆಲ್ಲಾ ತನ್ನ ಅಣ್ಣನೇ ಮಾಡಿದರೂ, ಬೆಳೆದ ಪೈರನ್ನು ಕೊಯಿದು ಮನೆಗೆ ಸೇರಿಸುವ ಸಾಮರ್ಥ್ಯ ಕೂಡಾ ಅವನಿಗಿಲ್ಲದೆ ಹೋಗಿತ್ತು. ತಮ್ಮನ ನತದೃಷ್ಟತೆಯನ್ನು ನೋಡಿ ರಂಗನಿಗೆ ತುಂಬ ಮರುಕವುಂಟಾಯಿತು.





# ಸೀತಾಸಾಗರ

ಹಿಂದೆ ಒಂದು ಕಾಲದಲ್ಲಿ ಮೋತೀಪುರದ ಜಮೀನ್ದಾರನಾಗಿದ್ದ ರೂಪಾರಾಮನಿಗೆ ಲಕ್ಷ್ಮಿ ಎಂಬ ಹೆಂಡತಿ ಇದ್ದಳು. ಮಹಾ ಪತಿವ್ರತೆ. ಅವಳು ಒಬ್ಬ ಮಗನನ್ನು ಹೆತ್ತು ಒಂದು ಪರ್ವದಿನ ಶುಭ ಗಳಿಗೆಯಲ್ಲಿ ಸತ್ತುಹೋಗಿಬಿಟ್ಟಳು.

ಅವಳ ಮೇಲೆ ಅಪಾರ ಅನುರಾಗವಿಟ್ಟಿದ್ದ ರೂಪಾರಾಮನು ಅವಳ ಹೆಸರಿನಲ್ಲಿ ಒಂದು ಕೆರೆಯನ್ನು ತೋಡಿಸಿ ಅದಕ್ಕೆ ಲಕ್ಷ್ಮೀ ಸಾಗರವೆಂದು ಹೆಸರಿಟ್ಟನು. ಅವಳನ್ನು ದಹನಮಾಡಿದ ಸ್ಥಳದ ಬದಿಯಲ್ಲೇ ಲಕ್ಷ್ಮೀ ಸಾಗರದ ನಿರ್ಮಾಣವಾಗಿತ್ತು. ದಹನದ ಜಾಗದಲ್ಲಿ ಸುಂದರವಾದ ಮಂಟಪವೆದ್ದಿತ್ತು. ಆಮೇಲೆ ಊರಿನವರು ಲಕ್ಷ್ಮಿ ಸತ್ತ ದಿನದಲ್ಲಿ ಪ್ರತಿ ವರ್ಷ ಲಕ್ಷ್ಮೀ ಸಾಗರದಲ್ಲಿ ಸ್ನಾನೋತ್ಸವ ನಡೆಸತೊಡಗಿದರು. ಅದೊಂದು ಪುಣ್ಯ ತೀರ್ಥವೆನಿಸಿತು. ಜನರು ಎಲ್ಲೆಲ್ಲಿಂದಲೋ ಬರತೊಡಗಿದರು.

ಜಮೀನ್ದಾರ ರೂಪಾರಾಮನು ಕೆಲವು ವರ್ಷಗಳವರೆಗೆ ವಿವಾಹ ಮಾಡಿಕೊಳ್ಳಲಿಲ್ಲ. ಆ ಮೇಲೆ ಮತ್ತೊಬ್ಬ ಜಮೀನ್ದಾರನ ಆಹ್ವಾನದಿಂದ ಅಲ್ಲಿಗೆ ಹೋಗಿ. ಅವನ ಅತಿಥಿಯಾಗಿ ಅವನ ಮಗಳು ಸೀತೆಯನ್ನು ನೋಡಿ ಮುಗ್ಧನಾದನು. ಸೀತೆ ಸುಂದರಿ. ವಿದ್ವಾಂಸಳಾಗಿದ್ದಳು. ಸೀತೆಯ ತಂದೆ ಅವಳನ್ನು ತನಗೆ ಕೊಟ್ಟು ಮದುವೆ ಮಾಡುವುದಾಗಿ ಹೇಳಿದಾಗ ರೂಪಾರಾಮನು ಒಪ್ಪಿಗೆ ಕೊಟ್ಟನು.

ಹಾಗೆ ರೂಪಾರಾಮನ ಎರಡನೇ ಹೆಂಡತಿಯಾಗಿ ಸೀತೆ ಬಂದಳು. ಅವಳ ಸೌಜನ್ಯ ಸುಗುಣಗಳಿಗೆ ಜಮೀನ್ದಾರನ ಮನೆಯವರೆಲ್ಲರೂ ಮುಗ್ಧರಾದರು. ಅವಳು ತನ್ನ ಸವತಿಯ ಮಗನನ್ನು ಸ್ವಂತ ಮಗನಂತೆ ನೋಡುತ್ತಿದ್ದಳು. ಆದರಿಂದ ರೂಪಾರಾಮನು ಅತ್ಯಾನಂದ ಪಡುತ್ತ, ಸೀತೆಯ ಹೆಸರಿನಲ್ಲಿ ಇನ್ನೊಂದು ಕೆರೆ ತೋಡಿಸಿ ಅದಕ್ಕೆ ಸೀತಾ ಸಾಗರವೆಂದು ಹೆಸರಿಟ್ಟನು. ಆದರೆ ಜನರು ಲಕ್ಷ್ಮೀ ಸಾಗರವನ್ನು ನೋಡಿದಂತೆ ಸೀತಾ ಸಾಗರವನ್ನು ನೋಡಲಿಲ್ಲ. ಅದಕ್ಕೆ ಬಂದಂತಹ ಪುಣ್ಯತೀರ್ಥದ ಭಾವನೆ ಇದಕ್ಕೆ ಬರಲಿಲ್ಲ. ಬರುವಂತೆಯೂ ಇರಲಿಲ್ಲ.

ಸೀತೆ ತನ್ನ ಕೋಣೆಯ ಗವಾಕ್ಷದ ಹಿಂದೆ ಕುಳಿತುಕೊಂಡು ಸೀತಾ ಸಾಗರವನ್ನು ನೋಡುವಳು. ಅವಳು ಸಹಜವಾಗಿ ವಿಶಾಲ ಹೃದಯದವಳಾದರೂ, ಸತ್ತರೂ ಮರೆಯುವಂತಹ ಲಕ್ಷ್ಮಿಯನ್ನು ನೆನೆದು

ಪಿ. ಸಿ. ಸರ್ಕಾರ್, ಇಂದ್ರಜಾಲಿಕರು



ಈರ್ಷ್ಯೆಗೊಳಗಾಗದಿರಲಿಲ್ಲ. ಹೀಗಿರಲು, ಒಂದು ದಿನ ರೂಪಾರಾಮನು ಅವಳನ್ನು ನೋಡಿ, "ನೀನು ಎಲ್ಲಾ ವಿಧದಲ್ಲಿಯೂ ಧನ್ಯಳು. ಲಕ್ಷ್ಮಿ ಸತ್ತು ಕೀರ್ತಿಶಾಲಿನಿಯಾದರೆ ನೀನು ಬದುಕಿಕೊಂಡೇ ನಿನ್ನ ಕೀರ್ತಿ ನೋಡುತ್ತಿರುವಿ! ನೀನೇ ಭಾಗ್ಯಶಾಲಿನಿ" ಎಂದನು.

ಸೀತೆ ನಿಟ್ಟುಸಿರು ಬಿಟ್ಟು, "ಮಣ್ಣು ಹಾಕಲಿ ನನ್ನ ಭಾಗ್ಯಕ್ಕೆ! ಸೀತಾ ಸಾಗರದಲ್ಲೇನಿದೆ? ಬರೀ ಸಪ್ಪೆ. ಲಕ್ಷ್ಮಿಯ ಹಾಗೆ ನಾನೂ ಧನ್ಯಳಾಗಬೇಕಾದರೆ ಒಂದು ಪರ್ವದಿನದ ಶುಭಗಳಿಗೆಯಲ್ಲಿ ಸತ್ತು, ಸೀತಾ ಸಾಗರದ ಬದಿಯಲ್ಲಿ ದಹನಳಾಗಬೇಕು." ಎಂದಳು.

ಅವಳ ಮಾತನ್ನು ಕೇಳಿದ ಮೇಲೆ ರೂಪಾರಾಮನಿಗೆ ತನ್ನ ಹೆಂಡತಿಯ ಮನೋವೇದನೆಯ ವಿಷಯ ಗೊತ್ತಾಯಿತು. ಅವಳಿಗೆ ತೃಪ್ತಿಯಾಗುವ ಹಾಗೆ ಏನಾದರೂ ಮಾಡಬೇಕೆಂದು ನಿಶ್ಚಯಿಸಿಕೊಂಡನು.

ರೂಪಾರಾಮನು ಸೀತೆಯೊಂದಿಗೆ, "ನಾನು ಸೀತಾ ಸಾಗರದ ಬದಿಯಲ್ಲಿ ಒಂದು ದೇವಾಲಯ ಕಟ್ಟಿಸುತ್ತೇನೆ. ಆಗ ಸೀತಾ ಸಾಗರ ಕೂಡಾ ಲಕ್ಷ್ಮೀ ಸಾಗರದ ಹಾಗೆಯೇ ಪುಣ್ಯಕ್ಷೇತ್ರವೆನಿಸಿ ಪವಿತ್ರವಾಗುತ್ತದೆ" ಎಂದನು.

"ಏನಾದರೂ ಲಕ್ಷ್ಮೀ ಸಾಗರದಹಾಗಾಗದು. ಅದಕ್ಕೆ ಸ್ವತಃ ಒಂದು ಪವಿತ್ರತೆಯುಂಟು. ದೇವಸ್ಥಾನದಿಂದ ಸೀತಾ ಸಾಗರಕ್ಕೆ ಪವಿತ್ರತೆ ಬಂದರೆ ಅದು ಆ ದೇವಾಲಯದಿಂದಾಯಿತು. ಸೀತಾ ಸಾಗರದ್ದು ಹೇಗಾಗುತ್ತದೆ? ಅದರ ಮೇಲೆ ನಾನು ಬಂಜೆ ಬೇರೆ!" ಎಂದಳು ಕಣ್ಣೀರು ತುಂಬಿ.

"ಆ ದೇವಾಲಯವನ್ನು ನಿನ್ನ ಹೆಸರಿನಿಂದಲೇ ಕಟ್ಟಿಸುತ್ತೇನೆ. ಅದು ಶಿವಾಲಯ. ಆ ಶಿವನ ಅನುಗ್ರಹದಿಂದ ನೀನು ಗರ್ಭಿಣಿಯೂ ಆಗುವಿ. ನಂಬು." ಎಂದ ರೂಪಾರಾಮ.

ಅದರಂತೆ ಬೇಗದಲ್ಲೇ ಸೀತಾ ಸಾಗರದ ಬದಿಯಲ್ಲಿ ಹಾಲುಗಲ್ಲಿನಿಂದ ಕಟ್ಟಡವೆದ್ದಿತು. ಶಿವಾಲಯವು ತಯಾರಾಯಿತು. ಇನ್ನು ಲಿಂಗ ಪ್ರತಿಷ್ಠಾಪನೆಯ ಮಹೋತ್ಸವ ನಡೆಯಬೇಕು. ಅಷ್ಟರಲ್ಲಿ ಸೀತೆ ಗರ್ಭಿಣಿಯಾಗಿರುವ ಸಂಗತಿ ಗೊತ್ತಾಯಿತು.

ಸೋಮನಾಥನೆಂಬ ಐಂದ್ರಜಾಲಿಕನು ರೂಪಾರಾಮನಿಗೆ ತುಂಬ ಸ್ನೇಹಿತ. ಬಾಲ್ಯದಿಂದಲೂ ಅವರಿಬ್ಬರೂ ಆಡಿಪಾಡಿ ಬೆಳೆದವರು. ಜಮೀನ್ದಾರ ರೂಪಾರಾಮನ ಗೃಹರಹಸ್ಯಗಳೆಲ್ಲ ಅವನಿಗೆ ಗೊತ್ತು. ಅನೇಕ ಬಾರಿ ರೂಪಾರಾಮನಿಗೆ ಬಂದ ಸಮಸ್ಯೆಗಳನ್ನು ಸೋಮನಾಥನು ಪರಿಹಾರ ಮಾಡಿದ್ದನು. ಸೋಮನಾಥನು ರೂಪಾರಾಮನೊಂದಿಗೆ, "ಇದು ಸೀತೆಗೆ ಸಂತೋಷವೆನಿಸುವ ಕಾಲ. ಅವಳ ಆನಂದವು ಪೂರ್ತಿಯಾಗಬೇಕಾದರೆ ಲಕ್ಷ್ಮೀ ಸಾಗರಕ್ಕಿರುವ ಪವಿತ್ರತೆ ಸೀತಾ ಸಾಗರಕ್ಕೆ ಕೂಡಾ ಬರಬೇಕು. ಆಗಲೇ ಆಕೆಯ ಚಿಂತೆ ಪೂರಾ ಹೋಗುತ್ತದೆ. ತೃಪ್ತಿಯಾಗುತ್ತದೆ. ಗರ್ಭಿಣಿಯಾಗಿರುವವಳಿಗೆ ಮನಸ್ಸಿನಲ್ಲಿ ಕೊರತೆಯೋ ಚಿಂತೆಯೋ ಇದ್ದರೆ ಹುಟ್ಟುವ

ಶಿಶುವಿಗೂ ಕೆಡುಕಾಗುತ್ತದೆ, ಗೊತ್ತೇ ? " ಎಂದನು. ಅದಕ್ಕೆ ರೂಪಾರಾಂ, "ಅದು ನನ್ನ ಕೈಯಲ್ಲಿಲ್ಲ. ಸೀತಾ ಸಾಗರವನ್ನು ಕೂಡಾ ಭಕ್ತಿಯಿಂದ ನೋಡುವಂತೆ ನಾನು ಜನರಿಗೆ ಹೇಳಲು ಸಾಧ್ಯವೆ? ಲಕ್ಷ್ಮಿ ಪರ್ವದಿನದಲ್ಲಿ ಮುತ್ತೈದೆ ಸಾವು ಸತ್ತದ್ದರಿಂದ ಜನರು ಲಕ್ಷ್ಮೀ ಸಾಗರವನ್ನು ಪವಿತ್ರವೆಂದು ಭಾವಿಸಿದ್ದಾರೆ" ಎಂದನು.

"ನೀನು ಕೂಡಾ ಸಹಾಯ ಮಾಡಿದರೆ ನಿನ್ನಿಂದಾಗದ ಕೆಲಸವನ್ನು ನಾನು ಮಾಡುತ್ತೇನೆ. ಲಿಂಗ ಪ್ರತಿಷ್ಠಾಪನೆಗೆ ಲಿಂಗವನ್ನು ಬಹಿರಂಗವಾಗಿ ತರಕೂಡದು. ಅದು ನಮ್ಮ ಊರಿನಲ್ಲೇ ಉದ್ಭವಿಸಿದ ಹಾಗೆ ಮಾಡಿಬಿಡಬೇಕು." ಎಂದು ಸೋಮನಾಥನು ರೂಪಾರಾಮನಿಗೆ ಏನೋ ಒಂದು ಉಪಾಯವನ್ನು ವಿವರಿಸಿ ಹೇಳಿದನು.

ಮರುದಿನ ಒಂದು ಸಮಾಚಾರ ಊರೆಲ್ಲಾ ಹರಡಿತು. ಅದರ ಸಾರಾಂಶವೇನೆಂದರೆ, ಜಮೀನ್ದಾರ ರೂಪಾರಾಮನಿಗೆ ಒಂದು ಸ್ವಪ್ನ ಬಂತಂತೆ. ದೇವಾಲಯದಲ್ಲಿ ಪ್ರತಿಷ್ಠಿಸ ತಕ್ಕ ಲಿಂಗವು ಊರೊಳಗಿನ ಯಾವುದೋ ಒಂದು ಕೆರೆಯಲ್ಲಿಯೋ ಬಾವಿಯಲ್ಲಿಯೋ ಇದೆ. ಅದು ಯಾವ ನೀರಿನಲ್ಲಿದೆಯೋ, ಮುಹೂರ್ತದ ದಿನ ಅಭಿಷೇಕಕ್ಕಾಗಿ ತರಲಾಗುವ ನೀರಿನಿಂದ ತಿಳಿಯಬಹುದು. ಇದು ಜಮೀನ್ದಾರ ರೂಪಾರಾಮನಿಗೆ ಸ್ವಪ್ನದಲ್ಲಿ ಕಂಡ ಶಿವನ ಆದೇಶ.

ಈ ಸಮಾಚಾರ ಎಲ್ಲರಲ್ಲಿಯೂ ತುಂಬ ಕುತೂಹಲವನ್ನು ಕೆರಳಿಸಿತು, ಯಾವ ನೀರಿನಲ್ಲಿ ಶಿವಲಿಂಗವು ಅಡಗಿದೆಯೋ ಏನೋ ಎಂದುಕೊಂಡು ಎಲ್ಲರೂ ತಮ್ಮ ತಮ್ಮ ಕೆರೆಬಾವಿಗಳ ನೀರನ್ನು ಪವಿತ್ರವಾಗಿ ಭಾವಿಸತೊಡಗಿದರು.

ಮುಹೂರ್ತದಿನ ಬಂದಿತು. ಯಾವ ನೀರಿನಲ್ಲಿ ವಿಗ್ರಹವಿದೆ ಎಂದು ಪರೀಕ್ಷಿಸಲು ನೀರಿನ ಬಣ್ಣ ಬದಲಾವಣೆಯಿಂದ ಗೊತ್ತಾಗುತ್ತದೆಂದು ರೂಪಾರಾಮನಿಗೆ ಮುಂಚಿನ ರಾತ್ರಿ ಪುನ ಕನಸಾಯಿತು. ಆದರಂತೆ ಎಲ್ಲಾ ಕೆರೆಬಾವಿಗಳ ನೀರನ್ನೂ ಒಂದೊಂದು ತಂಬಿಗೆ ತಂದು ಹೊಸ ದೇವಾಲಯದ ಮುಂದೆ



ಇಟ್ಟರು. ರೂಪಾರಾಮನೇ ನೀರಿನ ಪರೀಕ್ಷೆ ಮಾಡಿ ತಿಳಿಸಬೇಕು. ಆ ಪರೀಕ್ಷೆ ನಡೆಯುವ ಸಮಯಕ್ಕೆ ಸರಿಯಾಗಿ ಊರ ಜನರೆಲ್ಲಾ ಹೊಸ ದೇವಾಲಯದ ಮುಂದೆ ಸೇರಿದರು. ಹೊರಗಿನ ಊರಿನವರೂ ಬಂದು ಸೇರಿದರು. ರೂಪಾರಾಮನು ತನ್ನ ಕೈಯಲ್ಲಿ ಒಂದು ಗಾಜಿನ ಲೋಟವನ್ನು ತೆಗೆದುಕೊಂಡು, ಒಂದೊಂದೇ ತಂಬಿಗೆಯ ನೀರನ್ನು ಅದರಲ್ಲಿ ತುಂಬಿಸಿಕೊಂಡು, ಎತ್ತಿ ಹಿಡಿದು ಶಿವಸ್ಮರಣೆ ಮಾಡುತ್ತಾ, ಅದಲ್ಲವೆಂದು ಕೆಳಗೆ ಚೆಲ್ಲುತ್ತಾ ಹೋದನು.

ಹೀಗೆ ರಾಣೀ ಸಾಗರ, ಪದ್ಮ ಸರೋವರ, ದೇವಿ ಪುಷ್ಕರ; ಲಕ್ಷ್ಮೀ ಸಾಗರ ಮುಂತಾದ ಕೆರೆ ಸರೋವರ ಬಾವಿಗಳ ನೀರೆಲ್ಲಾ ಲೋಟದಲ್ಲಿ ಯಾವ ವಿಶೇಷವನ್ನೂ ತೋರಿಸಲಿಲ್ಲ. ಹಾಗೆಯೇ ಸೀತಾ ಸಾಗರದ ನೀರನ್ನು ಲೋಟದಲ್ಲಿ ಹಾಕಿ ಎತ್ತಿ ಹಿಡಿದು ಮಂತ್ರ ಜಪಿಸಿದಾಗ, ನೋಡ ನೋಡುತ್ತಿದ್ದಂತೆ ಅದರ ಬಣ್ಣವು ಊದಾ ರಂಗಿಗೆ ಬದಲಾಯಿತು. "ಜಯ ಜಯ! ಶಿವ ಶಿವಾ!" ಎಂದು ರೂಪಾರಾಮನು ಹೇಳಲು ಎಲ್ಲರೂ "ಶಿವ ಶಿವಾ! ಜಯ ಜಯಾ!" ಎಂದು ಘೋಷಿಸಿದರು.

ಆಮೇಲೆ ಸೀತಾ ಸಾಗರದ ನಾಲ್ಕು ಮೂಲೆಗಳಲ್ಲಿಯೂ ಹುಡುಕಲು ಅಂದವಾದ ಶಿವಲಿಂಗವು ದೊರಕಿತು. ಅದನ್ನು ಮೇಳತಾಳಗಳೊಂದಿಗೆ ಅತಿ ವೈಭವದಿಂದ ಮೆರವಣಿಗೆ ಮಾಡಿ ದೇವಾಲಯದೊಳಗೆ ಪ್ರತಿಷ್ಠೆ ಮಾಡಿದರು. ಉತ್ಸವವೂ ಘನ ವೈಭವದಿಂದ ನಡೆಯಿತು.

ಅಂದಿನಿಂದ ಸೀತಾ ಸಾಗರಕ್ಕೆ ಹೊಸ ಮಹತ್ವ ಬಂದಿತು. ಲಕ್ಷ್ಮೀ ಸಾಗರದಂತೆಯೇ ಅದೂ ಪುಣ್ಯ ತೀರ್ಥವಾಯಿತು.

ನೀರಿಗೆ ಬಣ್ಣ ಬರುವ ಏರ್ಪಾಡು ಮಾಡಿದವನು ಐಂದ್ರಜಾಲಿಕ ಸೋಮನಾಥನು. ಅವನು ಒಂದು ಸಪುರವಾದ ಕಪ್ಪುದಾರ ತೆಗೆದುಕೊಂಡು ಅದಕ್ಕೆ ಪೊಟಾಸಿಯಂ ಪರ್ಮಾಂಗನೇಟ್ ಪುಡಿಯನ್ನು ಅಂಟಿಸಿ, ಜಮೀನ್ದಾರ ರೂಪಾರಾಮನು ಎತ್ತಿದ ಕೈಗೆ ಸಿಗುವ ಹಾಗೆ ಅದರ ಕೊನೆಯನ್ನು ನೇತಾಡಿಸಿಟ್ಟಿದ್ದನು. ರೂಪಾರಾಮನು ಸೀತಾ ಸಾಗರದ ನೀರು ತುಂಬಿಸಿದ ಲೋಟವನ್ನು ಎತ್ತಿದಾಗ ಆ ದಾರದ ಕೊನೇ ಭಾಗವು ನೀರಿನಲ್ಲಿ ಬೀಳುವ ಹಾಗೆ ಮಾಡಿಕೊಂಡನು. ಆಗ ಆ ನೀರಿನ ಬಣ್ಣವು ಬದಲಾವಣೆಗೊಂಡಿತು. ಹಾಗೆ ಅಲ್ಲಿ ಕಪ್ಪುದಾರವಿರುವ ಸಂಗತಿ ಬೇರೆ ಯಾರಿಗೂ ಗೊತ್ತಾಗುವಂತಿಲ್ಲ.

ಹೀಗೆಲ್ಲಾ ಆದುದರಿಂದ ಸೀತೆಗೂ ಬಹಳ ಸಂತೋಷವಾಯಿತು. ಕಾಲಕ್ರಮದಲ್ಲಿ ಅವಳು ಹೆಣ್ಣು ಮಗುವಿನ ತಾಯಿಯಾದಳು.





# ಪ್ರೇಮ ಪರೀಕ್ಷೆ

ಕಾಂಚೀಪುರದಲ್ಲಿ ಧನಗುಪ್ತನೆಂಬ ಮುತ್ತು ರತ್ನಗಳ ವ್ಯಾಪಾರಿ ಇದ್ದನು. ಅವನು ದ್ವೀಪಾಂತರ ವ್ಯಾಪಾರಿಯಾದುದರಿಂದ ಅವನಿಗೊಂದು ಬೆಲೆ ಬಾಳುವ ಹಡಗು ಕೂಡಾ ಇದ್ದಿತು. ಅವನು ವಿದೇಶಗಳಿಂದ ಕಡಿಮೆ ಬೆಲೆಗೆ ರತ್ನಗಳನ್ನು ಕೊಂಡುಕೊಂಡು ಬೇರೆ ದೇಶಗಳಲ್ಲಿ ಒಳ್ಳೆಯ ಬೆಲೆಗೆ ಮಾರುತ್ತ ಲಕ್ಷಕ್ಕೆ ಲಕ್ಷ ಲಾಭ ಗಳಿಸಿದ್ದನು.

ಧನಗುಪ್ತನಿಗೆ ಪದ್ಮಕಳೆ ಎಂಬ ಮಗಳಿದ್ದಳು. ಅವಳ ತಾಯಿ ಚಿಕ್ಕತನದಲ್ಲೇ ಸತ್ತುಹೋದುದರಿಂದ ತಂದೆ ಅವಳನ್ನು ಅತ್ಯಂತ ಪ್ರೇಮದಿಂದ ಬೆಳಸಿ ತನ್ನಂತಹ ದೊಡ್ಡ ಲಕ್ಷಾಧಿಪತಿಗೇ ಕೊಟ್ಟು ಮದುವೆ ಮಾಡಬೇಕೆಂದು ನೋಡಿಕೊಂಡಿದ್ದನು.

ಆದರೆ ಪದ್ಮಕಳೆ ವಿದ್ಯಾಗುಪ್ತನೆಂಬ ಸಾಧಾರಣ ಯುವಕನನ್ನು ಪ್ರೇಮಿಸಿಕೊಂಡಿರುವ ಸಂಗತಿ ಅವನಿಗೆ ತಿಳಿದಿಲ್ಲ. ಅವರಿಬ್ಬರೂ ಮದುವೆ ಮಾಡಿಕೊಳ್ಳುವ ನಿರ್ಧಾರಕ್ಕೂ ಬಂದಿದ್ದರು.

ತನ್ನ ತಂದೆ ತನಗಾಗಿ ವರನನ್ನು ಹುಡುಕುವ ಸಂಗತಿ ಪದ್ಮಕಳೆಗೆ ಗೊತ್ತಾಯಿತು. ಅವಳು ವಿದ್ಯಾಗುಪ್ತನೊಂದಿಗೆ ಆ ಸಮಾಚಾರ ಹೇಳಿ, "ನೀನು ಕೂಡಲೇ ನನ್ನ ತಂದೆಯ ಹತ್ತಿರ ಬಂದು ನಮ್ಮ ಪ್ರೇಮ ವ್ಯವಹಾರವನ್ನು ಹೇಳಿ, "ನನ್ನನ್ನು ನಿನಗೆ ಕೊಟ್ಟು ಮದುವೆ ಮಾಡಬೇಕೆಂದು ಕೇಳು. ಆಮೇಲೆ ದೇವರಿದ್ದಾನೆ" ಎಂದಳು.

ವಿದ್ಯಾಗುಪ್ತನು ಸರಿ ಎಂದು ಒಪ್ಪಿ, ಮರುದಿನ ಧನಗುಪ್ತನು ಒಬ್ಬಂಟಿಗನಾಗಿರುವ ಸಮಯ ನೋಡಿ ಅವನ ಬಳಿಗೆ ಬಂದು, ತಾನೂ ಪದ್ಮಕಳೆಯೂ ಒಬ್ಬರನ್ನೊಬ್ಬರು ಪ್ರೇಮಿಸಿಕೊಳ್ಳುವ ಸಂಗತಿಯನ್ನು ಹೇಳಿದನು. "ಆದುದರಿಂದ ಅವಳನ್ನು ನನಗೆ ಕೊಟ್ಟು ಮದುವೆ ಮಾಡಬೇಕೆಂದು ಪ್ರಾರ್ಥಿಸುತ್ತೇನೆ" ಎಂದು ಕೇಳಿಕೊಂಡನು. ಧನಗುಪ್ತನು ಒಳಗೆ ಹೋಗಿ ತನ್ನ ಮಗಳ ಹತ್ತಿರ ಕೇಳಿದನು.

"ವಿದ್ಯಾಗುಪ್ತನು ಹೇಳಿದ ಮಾತು ನಿಜವೇ. ನಾನು ಆತನಹೊರತು ಬೇರೆ ಯಾರನ್ನೂ ಮದುವೆ ಮಾಡಿಕೊಳ್ಳಲು ಸಾಧ್ಯವಿಲ್ಲ ಅಪ್ಪಾ." ಎಂದು ಪದ್ಮಕಳೆ ತಂದೆಯೊಂದಿಗೆ ಹೇಳಿದಳು.

ವಿದ್ಯಾಗುಪ್ತನು ಎಂತಹವನೋ ತಿಳಿಯದೆ ಅವನ ಕೈಗೆ ತನ್ನ ಮಗಳನ್ನು ಕೊಡಲು ಧನಗುಪ್ತನ ಮನಸ್ಸು ಒಪ್ಪಲಿಲ್ಲ. ಹುಡುಗಿ ಬಾಹ್ಯರೂಪಕ್ಕೆ

ಓ. ವಿ. ರಾಜ

ಮರುಳಾಗಿ ಆಮೇಲೆ ಪಶ್ಚಾತ್ತಾಪಕ್ಕೆ ಗುರಿಯಾಗ ಬಾರದಲ್ಲಾ? ಹೀಗೆ ಹೇಳಿ ಅವಳ ಮನಸ್ಸನ್ನು ನೋಯಿಸಲೂ ಅವನಿಗಿಷ್ಟವಿಲ್ಲ. ಆದುದರಿಂದ ಧನ ಗುಪ್ತನು ವಿದ್ಯಾಗುಪ್ತನ ಬಳಿಗೆ ಬಂದು, "ನೋಡಪ್ಪಾ, ಎರಡು ದಿನಗಳಲ್ಲಿ ನನ್ನ ಮುಖ್ಯ ಬಂಧುಗಳೊಬ್ಬರು ಬರಲಿದ್ದಾರೆ. ಅವರು ಬಂದ ಕೂಡಲೇ ಅವರೊಂದಿಗೆ ಮಾತಾಡಿ ನಿನಗೆ ಉತ್ತರ ಹೇಳುತ್ತೇನೆ. ಅದುವರೆಗೆ ನೀನು ನಮ್ಮ ಮನೆಯಲ್ಲೇ ಇರು." ಎಂದನು.

ವಿದ್ಯಾಗುಪ್ತನು ಅದಕ್ಕೆ ಒಪ್ಪಿಕೊಂಡನು. ಆದರೆ ಧನಗುಪ್ತನು ಹೇಳಿದಂತೆ ಅವನ ಬಂಧುಗಳಾರೂ ಬರಲಿಲ್ಲ. ಬದಲಾಗಿ, ಎರಡನೇ ದಿನದಲ್ಲಿ ಧನ ಗುಪ್ತನಿಗೆ ದೊಡ್ಡ ದುರ್ವಾರ್ತೆಯೊಂದು ಬಂದಿತು. ಅದೇನೆಂದರೆ, ದೇಶಾಂತರದಿಂದ ರತ್ನಗಳನ್ನು ಹೇರಿ ಕೊಂಡು ಬರುತ್ತಿದ್ದ ಧನಗುಪ್ತನ ಹಡಗು ನಡು ಸಮುದ್ರದಲ್ಲಿ ಮುಳುಗಿಹೋಯಿತಂತೆ!

ಈ ವಾರ್ತೆ ಕೇಳಿ ಧನಗುಪ್ತನು ತುಂಬಾ ಸಂಕಟ ದಿಂದ ನರಳಿದನು. ಈ ಕೆಡಕು ತನ್ನ ಯೋಗದಿಂದಲೇ ಬಂದುದಾಗಿ ಧನಗುಪ್ತನಿಗೆ ತೋರುವುದೇನೋ ಎಂದು ವಿದ್ಯಾಗುಪ್ತನಿಗೆ ಭಯವಾಯಿತು. ಈ ವಾರ್ತೆ ನಿಮಿಷ ಮಾತ್ರದಲ್ಲಿ ಊರಿಗೆಲ್ಲಾ ಗೊತ್ತಾ ಯಿತು. ಧನಗುಪ್ತನಿಗೆ ಸಾಲ ಕೊಟ್ಟವರು ಬಂದು, ಅವನ ಆಸ್ತಿಪಾಸ್ತಿಗಳ ಲೆಕ್ಕ ನೋಡತೊಡಗಿದರು. ಅದೆಲ್ಲಾ ಅವರ ಸ್ವಾಧೀನವಾಗುವ ಗತಿ ಬಂತೆಂದು ಕೊಂಡು ಧನಗುಪ್ತನು ಊಟ ನಿದ್ದೆ ಬಿಟ್ಟನು.

ಅದನ್ನು ನೋಡಿ ವಿದ್ಯಾಗುಪ್ತನು, ಅವನ ಬಳಿಗೆ ಹೋಗಿ, "ಮಾವಯ್ಯಾ! ನೀವೇನೂ ಚಿಂತೆ ಮಾಡ ಬೇಡಿ, ಧನವು ಇಂದು ಬರುತ್ತೆ ನಾಳೆ ಹೋಗುತ್ತೆ. ನಿಮ್ಮನ್ನು ಯಾವ ವಿಧದಿಂದಾದರೂ ಪೋಷಿಸುವ ಶಕ್ತಿ ನನಗಿದೆ. ಇದೆಲ್ಲಾ ನಮ್ಮ ಪ್ರೇಮಕ್ಕೆ ಭಗವಂತನು ಇಟ್ಟ ಪರೀಕ್ಷೆಯಾಗಿರಬೇಕು. ನೀವೇನೂ ಹೆದರ ಬೇಡಿ. ನೀವು ಸಾಲದವರ ಲೆಕ್ಕಾಚಾರ ಮುಗಿಸಿ, ನಮ್ಮ ಮನೆಗೇ ಬಂದುಬಿಡಿ" ಎಂದನು.

ಆ ಮಾತು ಕೇಳಿ ಧನಗುಪ್ತನ ಮುಖದಲ್ಲಿ ಆನಂದವು ಹರಡಿತು. "ಇದು ಭಗವಂತನ ಪರೀಕ್ಷೆ ಯಲ್ಲವಪ್ಪಾ. ನಿನ್ನ ಗುಣವನ್ನು ಪರೀಕ್ಷೆ ಮಾಡೋಣ ವೆಂದು ನಾನೇ ಹೀಗೆಲ್ಲಾ ಮಾಡಿಸಿದೆ. ನೀನು ನನ್ನ ಮಗಳನ್ನೇ ಬಯಸುವಿಯೋ, ನನ್ನ ಆಸ್ತಿಪಾಸ್ತಿಗಳನ್ನು ಬಯಸುವೆಯೋ ಎಂದು ನೋಡಿದೆ. ನನ್ನ ಪರೀಕ್ಷೆ ಯಲ್ಲಿ ನೀನು ಗೆದ್ದೆ." ಎಂದನು.

ಆ ಮೇಲೆ ಬೇಗದಲ್ಲೇ ಪದ್ಮಕಳೆಯ ವಿವಾಹವು ವಿದ್ಯಾಗುಪ್ತನೊಂದಿಗೆ ಬಹು ವೈಭವದಿಂದ ನಡೆ ಯಿತು. ಧನಗುಪ್ತನು ತನ್ನ ವ್ಯಾಪಾರವನ್ನೆಲ್ಲಾ ಅಳಿಯನಿಗೇ ಒಪ್ಪಿಸಿ ನಿಶ್ಚಿಂತನಾದನು.





# ಸಾರಂಗನ ವೈರಾಗ್ಯ

ಹಿಂದೆ ಸುದರ್ಭ ಎಂಬುದೊಂದು ದೇಶವಿತ್ತು. ಅಲ್ಲಿ ಎಲ್ಲಾ ಬಗೆಯ ದುರಾಚಾರಗಳೂ ತಾಂಡವಿಸಿಕೊಂಡಿದ್ದುವು. ಹಳೆಯ ಕಾಟಾಚಾರಗಳಾದ ಅಸ್ಪೃಶ್ಯತೆ ತುಂಬ ಕಟ್ಟುನಿಟ್ಟಾಗಿದ್ದಿತು. ಅಂಥವರನ್ನು ಊರಹೊರಗೆ ದೂರದಲ್ಲಿರಿಸುತ್ತಿದ್ದರು. ಹೆಣ್ಣು ಮಕ್ಕಳಿಗೆ ವರದಕ್ಷಿಣೆ ಕೊಟ್ಟಹೊರತು ಮದುವೆಯಾಗಲಾರದು. ಅಧಿಕಾರಿಗಳು ಲಂಚ ಪಡೆದಹೊರತು ಯಾವ ಕೆಲಸವನ್ನೂ ಮಾಡರು. ಇದ್ದವರೂ ಇಲ್ಲದವರೂ ಸಹಾ ಕುಡಿತದ ಚಟಕ್ಕೆ ಬಿದ್ದು ಮನೆಯನ್ನೂ ಆರೋಗ್ಯವನ್ನೂ ಕೆಡಿಸಿಕೊಳ್ಳುತ್ತಿದ್ದರು.

ಅಂತಹ ಸುದರ್ಭ ದೇಶದಲ್ಲಿ ಸಾರಂಗನೆಂಬ ಒಬ್ಬ ಮಹಾತ್ಮನಿದ್ದನು. ಪ್ರಜೆಗಳಲ್ಲಿರುವ ದುರಾಚಾರಗಳು ಹೋಗಬೇಕಾದರೆ, ಮೊದಲು ಜನತೆಯಲ್ಲಿ ಹರಡಿರುವ ನಿರಕ್ಷರಾಸ್ಕತೆ ಹೋಗಬೇಕೆಂದು ಆವನು ತೀರ್ಮಾನಿಸಿಕೊಂಡನು. ಅಂತೆಯೇ ಜನರಲ್ಲಿ ವಿದ್ಯೆಯ ಮೇಲೆ ಆಸಕ್ತಿ ಬರುವಂತೆ, ಅದನ್ನನುಸರಿಸಿ ಒಂದೊಂದೇ ದುರಾಚಾರಗಳು ತೊಲಗುವಂತೆ ದೊಡ್ಡದೊಂದು ಉದ್ಯಮವನ್ನು ಪ್ರಾರಂಭಿಸಿದನು.

ಆತನ ಈ ಸದುದ್ಯಮವನ್ನು ಅನೇಕಮಂದಿ ವ್ಯತಿರೇಕಿಸಿದರೂ ಅವನೇನೂ ಲಕ್ಷ್ಯಮಾಡಲಿಲ್ಲ. ಯುವಕರು ಅಧಿಕ ಸಂಖ್ಯಾಕರಾಗಿ ಅವನ ಉದ್ಯಮವನ್ನು ಬಲಪಡಿಸಿದರು. ಅದಾವುದೂ ಹಿರಿಯ ಪರಂಪರೆಯವರಿಗೆ ಹಿಡಿಸದೆ, ರಾಜನೊಂದಿಗೆ ದೂರಿಕೊಂಡರು. ರಾಜನು ಮಹಾತ್ಮನ ಉದ್ಯಮವನ್ನು ಅಡಗಿಸಲು ಪ್ರಯತ್ನಪಟ್ಟನು. ಆದರೆ ಸೈನಿಕರು ಕೂಡಾ ಪ್ರಜೆಗಳೊಂದಿಗೆ ಸೇರಿಕೊಂಡು ಬಿಟ್ಟುದರಿಂದ ಕಡೆಗೆ ಅವರೆಲ್ಲಾ ಸೇರಿ ರಾಜನನ್ನೇ ಬೀಳಿಸಿ ಬಿಟ್ಟರು. ಇದಕ್ಕೆಲ್ಲಾ ಕಾರಣೀಭೂತನಾದ ಸಾರಂಗನೇ ರಾಜನಾಗಬೇಕೆಂದು ಎಲ್ಲರೂ ಬಯಸಿದರು.

ಆದರೆ ಸಾರಂಗನು ನಿಜಕ್ಕೂ ಮಹಾತ್ಮನಾದುದರಿಂದ ಅವನಿಗೆ ರಾಜ್ಯಕಾಂಕ್ಷೆ ಸುತರಾಂ ಇರಲಿಲ್ಲ. ಅವನು ತನ್ನ ಅನುಚರರಲ್ಲಿ ಪ್ರಮುಖನಾದ ಚರಿತಾರ್ಥ ಎಂಬವನನ್ನು ರಾಜನನ್ನಾಗಿ ಮಾಡಿ, ಪ್ರಜೆಗಳಲ್ಲಿ ಹೇಗೆ ದುರಾಚಾರಗಳು ತಲೆಯೆತ್ತದಂತೆ ಮಾಡಬೇಕೆಂದು ಹೇಳಿ, ತಾನು ತಪಸ್ಸು ಮಾಡಲು ಕಾಡಿಗೆ ಹೊರಟು ಹೋದನು. ಅವನು ಅಡವಿಯಲ್ಲಿ ಆಶ್ರಮ ಕಲ್ಪಿಸಿಕೊಂಡು ಹತ್ತು ಹದಿನೈದು ವರ್ಷ

" ವಸುಂಧರ "

ಗಳನ್ನು ಕಳೆದನು. ಆಮೇಲೆ ಅವನಿಗೆ ತನ್ನ ಸುದರ್ಭ ದೇಶವು ಈಗ ಹೇಗಿದೆಯೋ ನೋಡಬೇಕೆನಿಸಿತು.

ಸಾರಂಗನು ಚರಿತಾರ್ಥನ ಬಳಿಗೆ ಒಬ್ಬ ಶಿಷ್ಯನನ್ನು ಕಳುಹಿಸಿ, ತನಗೆ ದೇಶದ ಪರಿಸ್ಥಿತಿ ನೋಡಬೇಕೆಂದಿರುವ ಸಂಗತಿಯನ್ನು ತಿಳಿಯಪಡಿಸಿದನು. ಈ ಸಮಾಚಾರ ತಿಳಿದ ಕೂಡಲೇ ಚರಿತಾರ್ಥನು ರಥದ ಮೇಲೆ ತಾನೇ ಸಾರಂಗನನ್ನು ಕರೆದು ತರಲು ಹೊರಟನು. ಸಾರಂಗನು ತನ್ನ ಆಶ್ರಮವನ್ನು ಶಿಷ್ಯರಿಗೆ ಒಪ್ಪಿಸಿ. ಚರಿತಾರ್ಥನೊಂದಿಗೆ ರಥಾರೋಹಣ ಮಾಡಿ ಸುದರ್ಭಕ್ಕೆ ಹೊರಟನು.

ಸುದರ್ಭ ದೇಶದಲ್ಲಿ ಸಾರಂಗನಿಗೆ ಅತ್ಯಾದರ ಪೂರ್ವಕವಾದ, ಘನವೈಭವದ ಸ್ವಾಗತ ದೊರೆಯಿತು. ಸಾರಂಗನು ದೇಶದ ಬೇರೆ ಬೇರೆ ಭಾಗಗಳಿಗೆ ಪರ್ಯಟನೆ ಮಾಡಲು ಹೊರಟಾಗ, ಚರಿತಾರ್ಥನೂ ಅವನೊಂದಿಗೇ ಇದ್ದನು.

ಮೊದಲು ಸಾರಂಗನು ಸೆರೆ ಶಾಲೆಗೆ ಹೋಗಿ ಅಲ್ಲಿರುವ ಖೈದಿಗಳನ್ನು ನೋಡಿ ವಿವರಗಳನ್ನು ಕೇಳಿದನು. ಅವರಲ್ಲಿ ವರದಕ್ಷಿಣೆ ತೆಗೆದುಕೊಂಡವರೂ, ಕುಡುಕರೂ, ಲಂಚ ಪಡೆದ ಉದ್ಯೋಗಸ್ಥರೂ ಇರುವರೆಂದು ಗೊತ್ತಾಯಿತು. ಇನ್ನೂ ಅನೇಕ ತಪ್ಪುಗಳನ್ನು ಮಾಡಿದವರೂ ಸೆರೆಮನೆಯಲ್ಲಿದ್ದರು.

"ನಮ್ಮ ಭಟರು ಸಾವಿರ ಕಣ್ಣುಗಳಿಂದ ಅಪರಾಧಿಗಳನ್ನು ಹಿಡಿಯುತ್ತಾರೆ. ಆದುದರಿಂದ ತಪ್ಪು ಮಾಡುವವರು ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ." ಎಂದನು ಚರಿತಾರ್ಥ.

"ಇವರೆಲ್ಲ ಎಷ್ಟು ಕಾಲದಿಂದ ಕಾರಾಗೃಹದಲ್ಲಿದ್ದಾರೆ ?" ಎಂದು ಕೇಳಿದ ಸಾರಂಗ.

"ಇವರು ಇಲ್ಲಿಗೆ ಬಂದು ಎಂಟು ಹತ್ತು ದಿನಗಳಾಗಿವೆ. ನಿಮ್ಮ ಆಶಯಗಳನ್ನು ದೃಷ್ಟಿಯಲ್ಲಿಟ್ಟುಕೊಂಡೇ ನಡೆಯುತ್ತಿದ್ದೇನೆ. ಅಪರಾಧಿಗಳಿಗೆ ಶಿಕ್ಷೆ ತುಂಬ ಕಠಿಣವಾಗಿಲ್ಲದಂತೆ ನೋಡಿಕೊಳ್ಳುತ್ತಿದ್ದೇನೆ. ಇವರು ಮಾಡಿದ ಅಪರಾಧಗಳಿಗೆ ಆರು ತಿಂಗಳಿಗಿಂತ ಹೆಚ್ಚಿನ ಶಿಕ್ಷೆ ಕೊಡುವುದಿಲ್ಲ" ಎಂದ ಚರಿತಾರ್ಥ.

"ಸಾಕು. ಇದನ್ನು ನೋಡಿದುದು ಸಾಕು. ಇಲ್ಲಿಂದ



ಬಹು ಬೇಗನೆ ಹೋಗೋಣ" ಎಂದನು ಸಾರಂಗ. ತನ್ನೊಳಗೇ ಏನೋ ಅತೃಪ್ತನಾಗಿ.

ಅಲ್ಲಿಂದ ಅವರಿಬ್ಬರೂ ಒಂದು ಕಲ್ಯಾಣಭವನಕ್ಕೆ ಹೋದರು. "ಈ ಕಲ್ಯಾಣ ಭವನದ ವಿಶೇಷ ವೇನೆಂದರೆ, ಜಾತಿಭೇದವಿಲ್ಲದ ವಿವಾಹಗಳಿಗೇ ಇಲ್ಲಿ ಸದುಪಾಯವಿದೆ. ವರ್ಣಾಂತರ ವಿವಾಹಗಳನ್ನು ಪ್ರೋತ್ಸಾಹಿಸಲಿಕ್ಕಾಗಿಯೇ ಈ ಭವನದ ನಿರ್ಮಾಣ ವಾಗಿದೆ. ಇಲ್ಲಿ ಈವರೆಗೆ ನೂರಕ್ಕೂ ಹೆಚ್ಚಿನ ಮದುವೆ ಗಳಾಗಿವೆ. ಪ್ರತಿ ವಿವಾಹದಲ್ಲಿಯೂ ವಧೂವರರಿಗೆ ಸಾವಿರ ವರಹ ಬಹುಮಾನ ಕೊಡುತ್ತೇನೆ. ಹತ್ತು ದಿನಗಳ ಕೆಳಗಷ್ಟೇ ಕೊನೇ ಮದುವೆ ನಡೆಯಿತು..."

ಹೀಗೆ ಚರಿತಾರ್ಥನು ಹೆಮ್ಮೆಯಿಂದಲೂ ಉತ್ಸಾಹ ದಿಂದಲೂ ಹೇಳುತ್ತಿರಲು, ಸಾರಂಗನು ಕಣ್ಣು ಗಳನ್ನು ಒತ್ತಿಕೊಂಡನು. ಅದು ಆನಂದಬಾಷ್ಪವಾಗಿರ ಬೇಕೆಂದು ಚರಿತಾರ್ಥನಿಗೆ ತೋರಿತು.

ಅಲ್ಲಿಂದ ಅವರಿಬ್ಬರೂ ಕ್ರೀಡಾಂಗಣವನ್ನು ನೋಡಲು ಹೋದರು. ಅಲ್ಲಿ ಅನೇಕ ಮಂದಿ ಬಾಲ ಬಾಲಿಕೆಯರು ಒಳ್ಳೆಯ ಶಿಸ್ತಿನಿಂದ ಉತ್ಸಾಹದಿಂದ ಬಗೆ ಬಗೆಯ ಆಟಗಳನ್ನು ಆಡುತ್ತಿದ್ದರು.

"ಮಹಾತ್ಮರೆ, ನೋಡಿದಿರಾ! ನಿಮ್ಮ ಆಶಯ ದಲ್ಲಿದ್ದ ಬದಲಾವಣೆ ಎಷ್ಟು ಬೇಗನೆ ಬಂದಿದೆಯೋ ಇಲ್ಲಿ ನೋಡಿ!" ಎಂದ ಚರಿತಾರ್ಥ.

"ಹಾಗೇನಾಯಿತು?" ಎಂದು ಸಾರಂಗನು ಕೇಳಿ ದನು. "ಇಲ್ಲಿ ಆಡುತ್ತಿರುವ ಅಗ್ರವರ್ಣಗಳ ಹುಡುಗರೊಂದಿಗೆ ಪಂಚಮರು ಸಹಾ ಇದ್ದಾರೆ!" ಎಂದ ಚರಿತಾರ್ಥ.

"ಇವರಲ್ಲಿ ಪಂಚಮರೂ ಇರುವರೆಂದು ನಿನಗೆ ಹೇಗೆ ಗೊತ್ತಾಯಿತು?" ಎಂದು ಸಾರಂಗನು ತಿರುಗಿ ಕೇಳಿದ.

"ಇಲ್ಲಿ ಎಲ್ಲಾ ಜಾತಿಯವರೂ ಆಡಿಕೊಳ್ಳ ಬಹುದು. ಮುಖ್ಯವಾಗಿ ಪಂಚಮರೂ ಬ್ರಾಹ್ಮ ಣರೂ ಒಟ್ಟಾಗಿ ಆಡಲಿಕ್ಕೇ ಈ ಸ್ಥಳದ ಏರ್ಪಾಡು. ಅಸ್ಪೃಶ್ಯತೆಯನ್ನು ನಿರ್ಮೂಲಿಸುವ ವ್ರತ ತೊಟ್ಟಿ ದ್ದೇನೆ. ಪಂಚಮರ ವ್ಯತ್ಯಾಸ ತಿಳಿಯಲಿಕ್ಕಾಗಿಯೇ



ಅಗ್ರವರ್ಣದವರಿಗೆ ನೀಲವರ್ಣದ ಬಟ್ಟೆಗಳನ್ನೂ, ಪಂಚಮರಿಗೆ ಹಸಿರು ದುಸ್ತುಗಳನ್ನೂ ಧರಿಸಲು ಏರ್ಪಾಡು ಮಾಡಿಸಿದ್ದೇವೆ. ಎಲ್ಲರೂ ಕೂಡಿ ಆಡಿ ನಲಿಯುತ್ತಿದ್ದಾರೆ" ಎಂದ ಚರಿತಾರ್ಥ.

ಸಾರಂಗನಿಗೆ ಉಕ್ಕಿಬರುವ ಕಣ್ಣೀರಿನಿಂದ ಎದುರಿನ ದೃಶ್ಯವು ಮುಚ್ಚಿಹೋಯಿತು.

"ನಾಳೆ ನಾವು ದೇಶಪರ್ಯಟನೆ ಪ್ರಾರಂಭಿಸೋಣ" ಎಂದ ಚರಿತಾರ್ಥ.

"ಬೇಡ ಬೇಡ! ನೋಡಿದ್ದೇ ಯಥೇಷ್ಟವಾಯಿತು. ಈಗ ನನ್ನಲ್ಲಿ ದೇಶಪರ್ಯಟನೆ ಮಾಡಬೇಕೆಂಬ ಕೋರಿಕೆ ಪೂರ್ತಿ ನಾಶವಾಯಿತು. ನಾನು ಹಿಂದಿರುಗಿ ಹೋಗುತ್ತೇನೆ. ಅದಕ್ಕೆ ಏರ್ಪಾಡು ಮಾಡಿಬಿಡು" ಎಂದ ಸಾರಂಗ.

"ಅದೇನು ಸ್ವಾಮಿ?" ಎಂದು ಚರಿತಾರ್ಥನು ಆಶ್ಚರ್ಯದಿಂದ ಕೇಳಿದನು.

"ದೇಶದಲ್ಲಿ ಯಾವ ಯಾವುದು ಇರಬಾರದು ಎಂದುಕೊಂಡೆನೋ ಅವೆಲ್ಲಾ ಇದ್ದ ಹಾಗೇ ಇವೆ. ಪಂಚಮರೆಂಬ ಹೆಸರೇ ಕಿವಿಗೆ ಬೀಳಬಾರದೆಂದುಕೊಂಡೆನು. ಅಸ್ಪೃಶ್ಯತೆ ಎಂಬ ಮಾತು ಇನ್ನೂ ಕೇಳಿಸುತ್ತಿದೆ, ಕಾಣಿಸುತ್ತಿದೆ. ಅವರೊಂದಿಗೆ ತಿರುಗಾಡುವುದನ್ನು ಇನ್ನೂ ದೊಡ್ಡ ವಿಷಯವಾಗಿಯೇ ಭಾವಿಸಲ್ಪಡುತ್ತಿದೆ. ವರ್ಣಾಂತರ ವಿವಾಹಗಳಿಗೆ ಪ್ರಭುತ್ವವು ಬಹುಮಾನ ಕೊಡುವುದೆಂದರೆ, ಪ್ರಜೆಗಳು ಆ ಬಗೆಯ ಮದುವೆಯನ್ನು ಇನ್ನೂ ಪ್ರಾರಂಭಿಸಲಿಲ್ಲವೆಂದೇ ಅರ್ಥ. ವರದಕ್ಷಿಣೆ, ಕುಡಿತ, ಲಂಚಕೋರತನ ತನ ಪ್ರಜೆಗಳಲ್ಲಿ ಇನ್ನೂ ಹಾಗೇ ಇದೆ ಎಂಬುದು ಕಾರಾಗೃಹದಲ್ಲಿರುವವರ ಮೂಲಕ ಗೊತ್ತಾಯಿತು. ಅಂಥ ಅಪರಾಧಗಳಿಗೆ ತಾನೇ ಅವರಿಗೆ ಶಿಕ್ಷೆಬಿದ್ದಿದೆ? ರಾಜನಾಗಿರುವ ನೀನು ಈ ಸಣ್ಣ ವಿಷಯ ಕೂಡಾ ತಿಳಿದುಕೊಳ್ಳಲಾಗದೆ, ಏನೋ ಮಹಾಸಾಧನೆ ಮಾಡಿದಂತೆ ಮಾತಾಡುವೆಯಲ್ಲ? ದುರಾಚಾರಗಳು ಶಾಸನಾದಿಗಳಿಂದ ಹೋಗುವಂಥವಲ್ಲ. ಪ್ರಜೆಗಳ ಮನಸ್ಸಿನಲ್ಲಿ ಪರಿವರ್ತನೆಯಾಗುವಂತೆ ಮಾಡಬೇಕು. ನನ್ನ ಶಿಕ್ಷಣದಿಂದ ಪ್ರಜಾನಾಯಕನಾದ ನಿನ್ನ ಪರಿಪಾಲನೆಯಲ್ಲೇ ಪರಿಸ್ಥಿತಿ ಹೀಗಿದ್ದರೆ, ಇನ್ನೊಬ್ಬರು ರಾಜನಾಗಿಬಿಟ್ಟರೆ, ಇದಕ್ಕಿಂತಲೂ ಹೆಚ್ಚು ಏನು ತಾನೇ ಸಾಧಿಸಿಯಾರು? ನಿನ್ನನ್ನು ಸರಿಯಾದ ನಾಯಕನೆಂದು ನಂಬಿದ ನಾನೇ ತಪ್ಪುಗಾರನಪ್ಪ. ಒಂದುಸಾರಿ ತಪ್ಪು ಮಾಡಿದವನು ಮತ್ತೊಮ್ಮೆ ಮಾಡಲಾರನೆಂದು ಹೇಗೆ ನಂಬುವುದು? ಅದಕ್ಕೇ ನನಗೆ ವಿರಕ್ತಿಯುಂಟಾಗಿದೆ. ನಿನಗೆ ತೋರಿದಂತೆ ನೀನು ರಾಜ್ಯವಾಳಿಕೊಂಡಿರು. ನಾನು ನನ್ನ ಆಶ್ರಮಕ್ಕೆ ಹೋಗುತ್ತೇನೆ. ಇನ್ನು ಮೇಲೆ ಸುದರ್ಭ ದೇಶಕ್ಕೆ ಕಾಲಿಡಲಾರೆ" ಎಂದ ಸಾರಂಗ.





# ತಿರುಗುಬಾಣ

ಒಂದು ಊರಿನಲ್ಲಿ ಶಾಂತಮ್ಮ ಎಂಬವಳಿಗೆ ತುಂಬಾ ಕಷ್ಟ ಬಂತು. ಅವಳ ಗಂಡ ತೀರಿಹೋಗಿಬಿಟ್ಟ. ಮೂವರು ಗಂಡು ಮಕ್ಕಳಿದ್ದಾರೆ. ಮನೆಯಲ್ಲಿ ತೀರ ಬಡತನ. ಹೇಗ್[illegible]ವರೂ ಈಜಿಕೊಂಡು ಹೋಗುತ್ತಿದ್ದಳಾದರೂ, ದಿನದಿಂದ ದಿನಕ್ಕೆ ಕಷ್ಟಗಳೇ ಬರುತ್ತಿದ್ದುವು. ಮಳೆ ತಪ್ಪಿ, ಬೆಳೆ ಕೆಟ್ಟು, ಶಾಂತಮ್ಮನ ಮಗಂದಿರಿಗೆ ಕೂಲಿ ಕೆಲಸ ಕೂಡಾ ಸಿಗಲಿಲ್ಲ

ಒಂದು ಚೂರು ಭಾರವಾದರೂ ತಗ್ಗಿದರೆ, ಅಷ್ಟಾದರೂ ಉಸಿರುಬಿಡಬಹುದಲ್ಲ ಎಂದುಕೊಂಡು ಶಾಂತಮ್ಮ ತನ್ನ ದೊಡ್ಡ ಮಗನನ್ನು ವೆಂಕಾಪುರದಲ್ಲಿರುವ ತನ್ನ ಅಣ್ಣನ ಮನೆಗೆ ಕಳುಹಿಸಿದಳು. ತನ್ನ ಅಣ್ಣನೂ ಅತ್ತಿಗೆಯೂ ಸ್ವಲ್ಪ ಉಳ್ಳವರಾದರೂ, ಇನ್ನೊಬ್ಬರಿಗೆ ಉಪಕಾರ ಮಾಡುವವರಲ್ಲವೆಂದು ಗೊತ್ತಿದ್ದರೂ, ತನ್ನ ಮಗನನ್ನು ಕೆಲವು ದಿನ ಇಟ್ಟುಕೊಳ್ಳದೆ ಹೋಗುವರೇ ಎಂದುಕೊಂಡಳು.

ಅಲ್ಲಿಗೆ ಹೋದ ದೊಡ್ಡ ಮಗ ನಾಲ್ಕು ದಿನಗಳಲ್ಲೇ ತಿರುಗಿ ಬಂದನು. "ಏನೋ? ಇಷ್ಟು ಬೇಗ ಹಿಂದಿರುಗಿ ಬಂದೆಯಲ್ಲ? ಏನಾಯಿತು?" ಎಂದು ಶಾಂತಮ್ಮ ಕೇಳಿದಳು. "ಅತ್ತೆಗೆ ಮೈ ಸರಿಯಿಲ್ಲಂತೆ. ಅವರ ಆರೋಗ್ಯ ಸರಿಯಾದ ಮೇಲೆ ಸಮಾಚಾರ ಕಳಿಸುತ್ತಾರಂತೆ. ಆಗ ಬಂದರೆ ಒಂದು ತಿಂಗಳು ಇರಬಹುದಂತೆ." ಎಂದನು.

ಶಾಂತಮ್ಮ ಅಣ್ಣನ ಪಿಟ್ಟಾಸೆತನವನ್ನು ಗೊಣಗೊಣನೆ ಹಳಿದುಕೊಂಡಳು. ಕೆಲವು ದಿನಗಳನ್ನು ದೂಡಿದ ಮೇಲೆ, ಮನೆಯಲ್ಲಿ ತಂಬಿಗೆ, ತಪ್ಪಲೆ, ಒಂದೊಂದೇ ಮಾರಿ ತಿಂದು ಮುಗಿಯುತ್ತಿರಲು ಮುಂದೇನೆಂಬ ಚಿಂತೆ ಹಿಡಿಯಿತು. ಒಣಗಿ ಸಾಯುವುದರ ಹೊರತು ಮತ್ತಾವ ದಾರಿಯೂ ಕಾಣಲೊಲ್ಲದು. ಶಾಂತಮ್ಮ ಈಸಾರಿ ಎರಡನೇ ಮಗನನ್ನು ತನ್ನ ಅಣ್ಣನ ಬಳಿಗೆ ಕಳುಹಿಸಿದಳು.

ವೆಂಕಾಪುರಕ್ಕೆ ಹೋದ ಅವಳ ಎರಡನೇ ಮಗನು ಎರಡೇ ದಿನಗಳಲ್ಲಿ ಹಿಂದಿರುಗಿ ಬಂದು ಬಿಟ್ಟನು. ಶಾಂತಮ್ಮನಿಗೆ ಅವನನ್ನು ನೋಡಿದ ಕೂಡಲೇ ಮೈ ಉರಿಯಿತು. "ಆಗಲೇ ಹಿಂದಿರುಗಿ ಏಕೆ ಬಂದೆ? ಇನ್ನೂ ನಾಲ್ಕಾರು ದಿನ ನಿನಗೆ ಅನ್ನ ಹಾಕಲೂ ಅವರಿಗೆ ಗತಿ ಇಲ್ಲವೇ? ಇಲ್ಲೇನು ತಿನ್ನಲಿಕ್ಕಿದೆ ಮಣ್ಣು? ನೀವು ಮೂರು ಕೋಣಗಳನ್ನೂ ಮೇಯಿಸಲು ನನ್ನಿಂದಾಗದು. ಹೋಗಿ ಎತ್ತಾದರೂ!

ಜಿ. ವಿಜಯ

ಹೋಗಿರೆಲ್ಲಾ !" ಎಂದು ಜಾಡಿಸಿ, ಮಕ್ಕಳಿಗೆ ಹೀಗೆ ಬಯ್ದುದನ್ನು ನೆನೆದು ಬಿಕ್ಕಿ ಬಿಕ್ಕಿ ಅಳತೊಡಗಿದಳು.

ತಾಯಿಯ ಭಾರವನ್ನು ಸ್ವಲ್ಪ ತಗ್ಗಿಸೋಣವೆಂದು ಮೂರನೇ ಮಗನು, "ಅಮ್ಮಾ, ನಾನು ಮಾವನ ಮನೆಗೆ ಹೋಗಿ ಕೆಲವು ದಿನ ಇದ್ದು ಬರುತ್ತೇನೆ." ಎಂದು ಹೇಳಿ ವೆಂಕಾಪುರಕ್ಕೆ ಹೊರಟನು.

ಅವನು ವೆಂಕಾಪುರವನ್ನು ತಲಪಿ, ತನ್ನ ಮಾವನ ಮನೆಯ ಹತ್ತಿರ ಹೋದಾಗ, ಅತ್ತೆ ಚಾವಡಿಯಲ್ಲಿ ಕುಳಿತುಕೊಂಡು ಅರುಳು ತಿನ್ನುತ್ತಿದ್ದಳು. ಅವನನ್ನು ನೋಡಿದ ಕೂಡಲೇ ಅರಳನ್ನು ಅಡಗಿಸಿ ಬಟ್ಟೆ ಮುಚ್ಚಿಟ್ಟಳು.

ಅವನನ್ನು ನೋಡಿ ಮಾವಯ್ಯ, "ನೋಡಪ್ಪಾ, ಈ ನಡುವೆ ನಿನ್ನ ಅತ್ತೆಗೆ ಏನೇನೂ ಕೂಡೋದಿಲ್ಲ. ಆರೋಗ್ಯ ತುಂಬಾ ಕೆಟ್ಟಿದೆ. ಎಲ್ಲಾ ಚಾಕರಿ ನನ್ನ ಮೇಲೆ ಬಿದ್ದಿದೆ. ಅತ್ತ ಹೊಲ ನೋಡಬೇಕು, ಮನೆ ನೋಡಬೇಕು. ದನಕರು ಕಾಯಬೇಕು. ಸಾಯುತಿದ್ದೇನೆ. ಏನು ಮಾಡಲಿ ಹೇಳು ?" ಎಂದು ಹೇಳುತ್ತಿರಲು, ಮೂರನೇಯವನು ಬಾಯಿ ಹಾಕಿ, "ನೀವೇನೂ ಚಿಂತಿಸಬೇಡಿ ಮಾವಯ್ಯಾ. ನೀವು ಇಷ್ಟು ಕಷ್ಟಪಡುವಾಗ ನೋಡುತ್ತಾ ಇರುತ್ತೇನೆಯೆ ? ಈಗಲೇ ಹೋಗಿ ಅಮ್ಮನನ್ನೂ ಅಣ್ಣಂದಿರನ್ನೂ ಕರಕೊಂಡು ಬರುತ್ತೇನೆ. ಅಮ್ಮ ಅಡಿಗೇ ಕೆಲಸ ಮನೆಗೆಲಸ ನೋಡಿಕೊಳ್ಳುತ್ತಾಳೆ. ನಾವು ಮೂವರೂ ಹೊಲ ತೋಟ ನೋಡಿ ಕೊಳ್ಳುತ್ತೇವೆ. ನಿಮಗೆ ವಿಶ್ರಾಂತಿ ಸಿಗುತ್ತದೆ. ಹೊರಟೆ" ಎಂದು ಹೊರಡಲು ಸಿದ್ಧನಾದನು.

ತನ್ನ ಉಪಾಯ ಹೀಗೆ ತಿರುಗಿ ಹೊಡೆಯುವುದನ್ನು ನೋಡಿ ಮಾವನ ಬಾಯಿಯಲ್ಲಿ ಯಾವ ಮಾತೂ ಬಾರದೆ ಹೋಯಿತು.

ಇದರೆ ಅತ್ತೆ ಬರುವ ಅಪಾಯವನ್ನು ತಿಳಿದು, ತಟಕ್ಕನೆ ಎದ್ದು ನಿಂತು, "ಹಾಗೆ ಮರಗಟ್ಟಿ ಕೂತಿರೇಕೇ ? ನೋಡಿದಿರಾ, ಹುಡುಗ ಸಣ್ಣವನಾದರೂ ನನ್ನ ಮೇಲೆ ಎಷ್ಟು ಅಭಿಮಾನ ! ನನಗೆ ಮೈ ಸರಿಯಿಲ್ಲಾಂತ ತಿಳಿದ ಕೂಡಲೇ ಹೋಗಿ ಅಮ್ಮನ್ನ ಕರಕೊಂಡು ಬರುತ್ತೇನೆ ಅನ್ನುತ್ತಾನೆ. ನಿಮಗೇನಾದರೂ ಅಂಥ ಆಲೋಚನೆ ಬಂತೇ ? ನನ್ನ ರೋಗ ದಿನಾ ಇದ್ದದ್ದೇ. ಅದನ್ನೇಕೆ ದೊಡ್ಡದು ಮಾಡುತ್ತೀರಿ ? ನೀವು ನಿಮ್ಮ ಹೊಲದ ಕೆಲಸ ನೋಡಿ. ನಾನೂ ಈ ಹುಡುಗನೂ ಮನೇ ಕೆಲಸ ನೋಡಿಕೊಳ್ತೀವೆ. ಬಂದ ಹುಡುಗ ಹಿಂದಿರುಗಿ ಹೋಗ್ತಾ ಇದ್ರೆ ಸುಮ್ಮನಿದ್ದೀರಿ ! ಪಾಪ ! ಬಾರಪ್ಪ ಒಳಗೆ !" ಎಂದು ಕರೆದಳು. ತನ್ನ ಉಪಾಯ ನಾಟಿದುದನ್ನು ನೋಡಿ ಶಾಂತಮ್ಮನ ಮೂರನೇ ಮಗನಿಗೆ ಸಂತೋಷವಾಯಿತು.





# ರಂಗಿ-ಮಂಗಿ

ಒಂದು ಊರಿನಲ್ಲಿ ಶ್ರೀಹರಿ ಎಂಬವನು ಒಬ್ಬ ರೈತನ ಮಗ. ಅವನ ಹೊಲಗದ್ದೆಗಳಿಗೆ ವರ್ಷಾವರ್ಷ ನೆರೆಹಾವಳಿ ಬರುತ್ತಿತ್ತು. ಆದುದರಿಂದ ಅವನು ವ್ಯವಸಾಯವನ್ನು ನಂಬಿಕೊಂಡು ಬದುಕಿರಲು ಇಷ್ಟವಿಲ್ಲದೆ, ನಗರದಲ್ಲಿ ಏನಾದರೂ ಉದ್ಯೋಗ ಹುಡುಕಿ ಬದುಕಬೇಕೆಂದುಕೊಂಡು ಗ್ರಾಮದಿಂದ ಹೊರಟನು. ಆಗ ರಾತ್ರಿ ಮೂರನೇ ಜಾವವಾದರೂ, ಬೆಳಗಾಗುವುದರೊಳಗೆ ನಗರಕ್ಕೆ ಮುಟ್ಟಬಹುದೆಂದು ಹೊರಟಿದ್ದನು.

ಅವನು ನಗರದಬಳಿಗೆ ಹೋದಾಗ ಬೆಳಗಾಯಿತು. ಅಲ್ಲಿಯ ನದಿಯ ನೀರು ಅವನನ್ನು ಆಕರ್ಷಿಸಿತು. ನದಿಗಿಳಿದು ಆನಂದದಿಂದ ಸ್ನಾನಮಾಡಿ, ಒಣ ಬಟ್ಟೆಗಳನ್ನು ಕಟ್ಟಿಕೊಳ್ಳುತ್ತಿದ್ದನು.

ಆಗ ಬಿಂದಿಗೆ ಎತ್ತಿಕೊಂಡು ಯಾವಳೋ ಒಬ್ಬಳು ಕಪ್ಪು ಹುಡುಗಿ ಅಲ್ಲಿಗೆ ಬಂದಳು.

ಅವನು ನಗರಕ್ಕೆ ಬರುವುದು ಅದುವೇ ಮೊದಲನೇ ಸಾರಿ. ಅಲ್ಲಿ ವೀರಾಸ್ವಾಮಿ ಎಂಬವನ ಪರಿಚಯ ಅವನಿಗಿತ್ತು. ಅವನು ನ್ಯಾಯಾಸ್ಥಾನದಲ್ಲಿ ಕರಣಿಕನಾಗಿದ್ದನು. ಅವನು ವಾಸವಾಗಿರುವ ಮನೆ ಎಲ್ಲಿರುವುದೆಂದು ಶ್ರೀಹರಿಗೆ ಗೊತ್ತಿರಲಿಲ್ಲ. ಮನೆ ತಿಳಿದರೆ ಅಲ್ಲಿಗೇ ಹೋಗಬಹುದೆಂದು ಈಗ ಅವನಿಗೆ ತೋರಿತು.

“ನಾಯಾಸ್ಥಾನದಲ್ಲಿ ಕೆಲಸ ಮಾಡುವ ವೀರಾಸ್ವಾಮಿಯ ಮನೆ ಎಲ್ಲೆಂದು ನಿನಗೆ ಗೊತ್ತೇ ?” ಎಂದು ಅವನು ಆ ಹುಡುಗಿಯನ್ನು ಕೇಳಿದನು.

“ವೀರಾಸ್ವಾಮಿಯವರ ಮನೆಯಿಂದ ಮೂರನೇ ಮನೇಲೇ ನಾವಿರೋದು. ನನ್ನ ಹೆಸರು ರಂಗಿ. ವೀರಾಸ್ವಾಮಿಯ ಮಗಳು ಮಂಗೀ ನನಗೆ ಚೆನ್ನಾಗಿ ಗೊತ್ತು. ಅವರ ಮನೆ ಆಂಜನೇಯ ಸ್ವಾಮಿ ದೇವಸ್ಥಾನದ ಬದಿಯಲ್ಲೇ ಇದೆ !” ಎಂದು ಹೇಳಿ ಆ ಕಪ್ಪು ಹುಡುಗಿ ನೀರಿನಲ್ಲಿ ಬಿಂದಿಗೆ ಮುಳುಗಿಸಲು ಬಗ್ಗಿದಳು. ಬಗ್ಗಿದವಳು ಗಾಬರಿಬಿದ್ದು ಬಿಂದಿಗೆ ಪಕ್ಕದಲ್ಲಿಟ್ಟು ಕುತ್ತಿಗೆ ತಡವುತ್ತ ಅಲ್ಲಿ ಇಲ್ಲಿ ನೋಡತೊಡಗಿದಳು.

“ಏನಾಯಿತು ?” ಎಂದು ಶ್ರೀಹರಿ ಆಶ್ಚರ್ಯದಿಂದ ಕೇಳಿದ. ಅವಳು ನಡುಗುವ ದನಿಯಿಂದ “ಕುತ್ತಿಗೇಲಿದ್ದ ಚಿನ್ನದ ಸರ ಎಲ್ಲೋ ಬಿದ್ದುಹೋಗಿದೆಯಲ್ಲಾ ! ಇನ್ನು ನನ್ನ ಚಿಕ್ಕಮ್ಮ ಕೊಂದು

ಎಂ. ಕೆ. ಈಶ್ವರರಾವ್



ಹಾಕ್ತಾಳೆ!" ಎಂದು ಗಂಟಲಲ್ಲೇ ಬಿಕ್ಕಿಕೊಂಡಳು ಕಣ್ಣೀರು ತುಂಬಿ. ಶ್ರೀಹರಿಗೆ ಕನಿಕರವೆನಿಸಿತು.

ಅವಳ ಮಲತಾಯಿ ಜೋರಿನವಳೋ ಏನೋ? ಅವಳೊಂದಿಗೆ ಅವನೂ ಸರವನ್ನು ಹುಡುಕಿ ನೋಡಿದ. ಪ್ರಯೋಜನವಾಗಲಿಲ್ಲ. ರಂಗಿ ನಿರಾಶೆಯಿಂದ ಸೆರಗಿನ ತುದಿಯಲ್ಲಿ ಕಣ್ಣೊತ್ತಿಕೊಂಡು, ನೀರ ಬಿಂದಿಗೆಯನ್ನು ಸೊಂಟದಲ್ಲಿಟ್ಟುಕೊಂಡು ದೇವರೇ ಗತಿಯೆಂದು ಹೊರಟುಹೋದಳು.

ಶ್ರೀಹರಿಯೂ ಊರೊಳಗೆ ಹೊರಟನು. ಅವನು ನದಿಯ ಬದಿಯಲ್ಲಿದ್ದ ದೇವಿಯ ಆಲಯದೊಳಗೆ ಹೊಕ್ಕು ಒಂದು ನಮಸ್ಕಾರ ಮಾಡಿ ಹೊರಟುದರಿಂದ, ರಂಗಿಗಿಂತ ತುಂಬ ಹಿಂದೆಯೇ ಇದ್ದ. ದಾರಿಯಲ್ಲಿ ಇನ್ನೂ ಜನ ಸಂಚಾರ ಪ್ರಾರಂಭವಾಗಿರಲಿಲ್ಲ. ರಂಗಿಯೂ ಕಾಣಿಸಲಿಲ್ಲ.

ಅವನು ಸ್ವಲ್ಪ ದೂರ ನಡೆದನೋ ಇಲ್ಲವೋ ದಾರಿಯ ಬದಿಯಲ್ಲಿ ಬಿದ್ದಿದ್ದ ಚಿನ್ನದ ಸರವೊಂದನ್ನು ನೋಡಿ ತಟ್ಟನೆ ಎತ್ತಿಕೊಂಡನು. ಅದು ರಂಗಿ ಕಳೆದುಕೊಂಡ ಸರವಾಗಿರಬೇಕೆಂದುಕೊಂಡು, ಆದಷ್ಟು ಬೇಗ ಅವಳಿಗೆ ಕೊಡಬೇಕೆಂದು ಹೊರಟನು. ಇಷ್ಟರಲ್ಲಿ ಮಲತಾಯಿ ಅವಳನ್ನು ಕಾಡಲು ಶುರು ಮಾಡಿದಳೋ ಏನೋ ಎಂದು ತೋರಿತು ಅವನಿಗೆ.

ಅವಳು ಹೇಳಿದಂತೆ ಆಂಜನೇಯ ದೇವಾಲಯದ ಮೂಲಕ, ರಂಗಿಯ ಮನೆಯನ್ನು ಕಂಡು ಹಿಡಿದು ಅಲ್ಲಿಗೆ ಹೋದನು. ರಂಗಿಯ ಸುತ್ತಲೂ ಅವಳ ಮಲತಾಯಿ ತುಂಬಾ ಮುಸುರೆ ಪಾತ್ರಗಳನ್ನಿಡಿಸಿ ತಿಕ್ಕಿಸುತ್ತಿದ್ದಳು.

ಶ್ರೀಹರಿ ಚಿನ್ನದ ಸರವನ್ನು ತೆಗೆದು, "ಇದು ನಿಮ್ಮ ರಂಗೀದು ಸರ. ನನಗೆ ದಾರಿಯಲ್ಲಿ ಸಿಕ್ಕಿತು. ಅವಳು ಹುಡುಕುತ್ತಾ ಇದ್ದುದನ್ನು ನೋಡಿದ್ದೆ. ಅದಕ್ಕೇ ತಂದೆ" ಎಂದು ಹೇಳಿ ಸರವನ್ನು ರಂಗಿಯ ಮಲತಾಯಿಗೆ ಕೊಟ್ಟನು.

"ಸರಿಯಪ್ಪ, ನಮ್ಮ ವಸ್ತು ನಮಗೆ ಸಿಕ್ಕಿತು. ಸಂತೋಷ" ಎಂದಳು ಚಿಕ್ಕಮ್ಮ. ಇದನ್ನು ಆಶ್ಚರ್ಯದಿಂದ ನೋಡಿದ ರಂಗಿ ಏನೋ ಹೇಳಬೇಕೆಂದುಕೊಂಡರೂ ಮಾತಾಡಲಿಲ್ಲ.

ಶ್ರೀಹರಿ ಅಲ್ಲಿಂದ ವೀರಾಸ್ವಾಮಿಯ ಮನೆಗೆ ಹೋದನು. ಅವನು ತನ್ನ ಪರಿಚಯ ಹೇಳಿದ ಮೇಲೆ ವೀರಾಸ್ವಾಮಿ ಅವನನ್ನು ಆದರಿಸಿ, ಕ್ಷೇಮಸಮಾಚಾರ ವಿಚಾರಿಸಿ, ಅವನಿಗೆ ಉದ್ಯೋಗದ ಪ್ರಯತ್ನ ಮಾಡುತ್ತೇನೆಂದು ಮಾತುಕೊಟ್ಟನು. ಅವನಿಗೆ ಊಟಕ್ಕೆ ಏರ್ಪಾಡು ಮಾಡಲು ತನ್ನ ಮಗಳು ಮಂಗೀಗೆ ಹೇಳಿ, ತನಗೆ ಹೊತ್ತಾದುದರಿಂದ ಕಚೇರಿಗೆ ಹೊರಟುಹೋದನು. ತಂದೆಯ ಮಾತಿನ ಮೇಲೆ ಮಂಗೀಗೆ ಗೌರವವಿರುವಂತೆ ಕಾಣಲಿಲ್ಲ.

ಚಂದದ ಮಗಳು ಅಂತ ತಲೇ ಮೇಲೆ ಹೊತ್ತು ಬೆಳೆಸಿರಬೇಕು, ಎಂದುಕೊಂಡನು. ವೀರಾಸ್ವಾಮಿಯ ಹೆಂಡತಿ ತೌರು ಮನೆಗೆ ಹೋದುದರಿಂದ,

ಮಂಗಿಯೇ ಎಲ್ಲಾ ನೋಡಿಕೊಳ್ಳುತ್ತಿದ್ದಳು. ಶ್ರೀಹರಿ ಊಟ ಮುಗಿಸಿ ಬೀದಿಬದಿಯ ಕೋಣೆಯಲ್ಲಿರುವಾಗ ರಂಗಿ ಗಡಿಬಿಡಿಯಿಂದ ಬಂದು "ಈ ಸರ ನನ್ನದಲ್ಲ. ನನ್ನ ಸರ ನೀರ ಬಿಂದಿಗೆಯೊಳಗೇ ಬಿದ್ದಿತ್ತು. ಇದು ಯಾರದೋ ಏನೋ, ಚಿಕ್ಕಮ್ಮನಿಗೆ ಗೊತ್ತಾಗದ ಹಾಗೆ ತಂದೆ. ನಿಮಗೆ ಸಿಕ್ಕಿದ್ದು ನೀವೇ ಇಟ್ಟುಕೊಳ್ಳಿ. ಇದನ್ನು ಕಾಣದೆ ಚಿಕ್ಕಮ್ಮ ನನ್ನನ್ನು ಕೊಂದರೂ ಚಿಂತಿಲ್ಲ." ಎಂದವಳೇ ಅವಸರದಿಂದ ಓಡಿಹೋದಳು.

ಶ್ರೀಹರಿ ರಂಗಿಯ ಪ್ರವರ್ತನೆಯನ್ನು ಕುರಿತು ಆಲೋಚಿಸುತ್ತಾ ಸರವನ್ನು ಚೀಲದಲ್ಲಿಟ್ಟು ನಿದ್ದೆ ಮಾಡಿದನು. ಅವನು ನಿದ್ದೆಯಿಂದೇಳುವಾಗ ವೀರಾಸ್ವಾಮಿ ಕಚೇರಿಯಿಂದ ಮನೆಗೆ ಬಂದಿದ್ದನು. ಆದರೆ ಮಂಗಿ ಮನೆಯಲ್ಲಿರಲಿಲ್ಲ. ಯಾರೋ ಧನವಂತರ ಮನೆಯಲ್ಲಿ ಮದುಮಗಳ ಸಿಂಗಾರ ಮಾಡುವುದನ್ನು ನೋಡಲು ಹೋಗಿದ್ದಾಳಂತೆ.

ಶ್ರೀಹರಿಯೂ ವೀರಾಸ್ವಾಮಿಯೂ ಲೋಕಾಭಿರಾಮವಾಗಿ ಮಾತಾಡುತ್ತಿದ್ದರು. ಆ ಸಮಯದಲ್ಲಿ ನಾಲ್ಕು ಮಂದಿ ರಕ್ಷಕ ಭಟರು ಬಂದು ಶ್ರೀಹರಿಯನ್ನು ತಮ್ಮೊಂದಿಗೆ ಧನವಂತನ ಮನೆಗೆ ಬರಲು ಕರೆದರು. ಕಾರಣ ತಿಳಿಯದೆ ವೀರಾಸ್ವಾಮಿ ಕೂಡಾ ಶ್ರೀಹರಿಯೊಂದಿಗೆ ಧನವಂತನ ಮನೆಗೆ ಹೊರಟನು.

ಅಲ್ಲಿ ಶ್ರೀಹರಿಯ ಮೇಲೆ ಒಂದು ಕಳ್ಳತನದ ಆರೋಪವು ಬಿದ್ದಿತು. ಆದರ ವಿಷಯದಲ್ಲಿ ಅಸಲು ನಡೆದ ಸಂಗತಿ ಏನಂದರೆ:

ಧನವಂತನ ಮಗಳಿಗೆ ಮದುವೆ ನಿಶ್ಚಯವಾದಾಗ ಅವಳ ಭಾವೀ ಅತ್ತೆಯವರು ಒಂದು ಚಿನ್ನದ ಸರವನ್ನು ಹಾಕಿದ್ದರು. ಮುಂಚಿನ ದಿನ ಸಾಯಂಕಾಲ ಆ ಹುಡುಗಿ ತನ್ನ ಗೆಳತಿಯರೊಂದಿಗೆ ದೇವಿಯ ಆಲಯಕ್ಕೆ ಹೋಗಿ ಹಿಂದಿರುಗಿ ಬರುತ್ತಿದ್ದಾಗ ಮುಸಕಾದ ಕತ್ತಲೆಯಲ್ಲಿ ಯಾವನೋ ಒಬ್ಬ ಅವಳ



ಕೊರಳಿಗೆ ಕೈಹಾಕಿ ಸರವನ್ನು ಕಡಿದುಕೊಂಡು ಓಡಿದ. ಅವಳು ಕಳ್ಳ ಕಳ್ಳ ಎಂದು ಕೂಗಿದಾಗ ನಾಲ್ವರು ಸೇರಿ ಕಳ್ಳನನ್ನು ಓಡಿಸಿಕೊಂಡುಹೋದರು. ಆದರೆ ಕಳ್ಳ ಸಿಗಲಿಲ್ಲ. ಆ ನಗ ಕಳೆದುಹೋದುದೊಂದು ಅಪಶಕುನದಂತೆ ಧನಿಕನನ್ನು ಬಾಧಿಸಿಕೊಂಡಿತ್ತು.

ಮಂಗಿ ಮದುಮಗಳನ್ನು ನೋಡಲು ಹೋಗುವಾಗ ಆ ಸರವನ್ನೇ ಕೊರಳಿಗೆ ಹಾಕಿಕೊಂಡು ಹೋಗಿದ್ದಳು. ಅದರ ಗುರುತು ಹಿಡಿದು ಅಲ್ಲಿನವರು ವಿಚಾರಿಸಲು ಮಂಗಿ, "ನಾನು ಯಾವ ಪಾಪವನ್ನೂ ಅರಿಯೆ. ನನ್ನ ಅಪ್ಪನ ಸ್ನೇಹಿತರು ಶ್ರೀಹರಿ ಅಂತ ಬಂದಿದ್ದರು. ಅವರು ಇದನ್ನು ನನಗೆ ಬಹುಮಾನ ಕೊಟ್ಟರು" ಅಂದಿದ್ದಳು.

ಶ್ರೀಹರಿಯೇ ಕಳ್ಳನೆಂದುಕೊಂಡು ಅವನನ್ನು ಹಿಡಿದು ತರಲು ರಕ್ಷಕ ಭಟರನ್ನು ಕಳಿಸಲಾಗಿತ್ತು.

ಇದನ್ನೆಲ್ಲಾ ಕೇಳಿ ಶ್ರೀಹರಿಗೆ ಪರಿಸ್ಥಿತಿ ಅರ್ಥವಾಯಿತು. ತಾನು ಆ ಸರವನ್ನು ಚೀಲದಲ್ಲಿ ಇಡುವ

ದನ್ನು ನೋಡಿದ ಮಂಗಿ, ತಾನು ನಿದ್ದೆ ಮಾಡಿ ಕೊಂಡಿರುವಾಗ, ದೊಡ್ಡಸ್ತಿಕೆಗೆ ಅದನ್ನು ಕೊರಳಿಗೆ ಹಾಕಿಕೊಂಡು ಬಂದಿದ್ದಾಳೆ.

"ಈ ಸರವನ್ನು ಮಂಗಿಗೆ ನೀನೇ ಕೊಟ್ಟೆ ಯೇನು ?" ಎಂದು ಧನಿಕನು ಶ್ರೀಹರಿಯನ್ನು ಕೇಳಿದನು. "ಹೌದು, ನಿಜ. ನಾನೇ ಕೊಟ್ಟೆ" ಎಂದ ತಟ್ಟನೆ ಶ್ರೀಹರಿ.

"ಹಾಗಾದರೆ ನೀನೇ ನಮ್ಮ ಹುಡುಗೀ ಕುತ್ತಿಗೆ ಯಿಂದ ಇದನ್ನು ಎಳೆದುಕೊಂಡು ಓಡಿದವನು !" ಎಂದ ಧನಿಕ.

"ಅದು ಮಾತ್ರ ನಾನಲ್ಲ" ಎಂದು ಶ್ರೀಹರಿ ನಡೆದ ಎಲ್ಲಾ ಸಂಗತಿಯನ್ನೂ ಹೇಳಿದನು. "ನಾನು ಈ ದಿನ ಬೆಳಿಗ್ಗೆಯಷ್ಟೇ ಈ ಊರಿಗೆ ಬಂದೆ. ಇದು ಕಳ್ಳನ ಕೈಯಿಂದಲೇ ಜಾರಿ ಬಿದ್ದಿರಬೇಕು. ನನಗೆ ದಾರಿಯ ಬದಿಯಲ್ಲೇ ಸಿಕ್ಕಿತು. ಮದುವೇ ಮನೆಗೆ ಹೋಗುವೆನೆಂದು ಮಂಗಿ ಹೇಳಿದಾಗ, ಹಾಕ್ಕೋ ಅಂತ ಕೊಟ್ಟೆ !" ಎಂದನು.

ಧನಿಕನು ಶ್ರೀಹರಿಯನ್ನು ಶಂಕಿಸಿ ಮಾತಾಡಿದು ದಕ್ಕೆ ಕ್ಷಮೆ ಕೇಳಿಕೊಂಡನು. "ಈ ಸರ ಸಿಕ್ಕಿದ್ದು ಕೊಪ್ಪರಿಗೆ ಸಿಕ್ಕಿದಂತೆ. ಕಾರಣ ಇದು ವರನ ಕಡೆಯಿಂದ ಬಂದದ್ದು. ಅವರ ಬಾಯಿಗೆ ಬೀಳುವುದು ತಪ್ಪಿತು" ಎಂದು ಧನಿಕನು ಶ್ರೀಹರಿಗೆ, ಒತ್ತಾಯವಾಗಿ ಒಂದು ಹಣದ ಗಂಟನ್ನು ಬಹುಮಾನವಾಗಿ ಕೊಟ್ಟನು. ಶ್ರೀಹರಿಯೂ ಸಂತೋಷದಿಂದ ಸ್ವೀಕರಿಸಿದನು.

ವೀರಾಸ್ವಾಮಿ ಮನೆಗೆ ಬಂದು ತನ್ನ ಮಗಳು ಮಾಡಿದ ಕಳ್ಳತನವನ್ನು ಮರೆಸಿ ಮಾತಾಡಿದ ಶ್ರೀಹರಿ ಯನ್ನು ಮೆಚ್ಚುತ್ತ, "ನನ್ನ ಮರ್ಯಾದೆಯನ್ನೂ ನನ್ನ ಮಗಳ ಮರ್ಯಾದೆಯನ್ನೂ ಉಳಿಸಿದೆ. ನಿನ್ನ ಉಪಕಾರ ಎಂದಿಗೂ ಮರೆಯಲಾರೆ. ನಿನಗೆ ನನ್ನ ಮಗಳನ್ನು ಕೊಟ್ಟು ಮದುವೆ ಮಾಡುತ್ತೇನೆ. ಅವಳು ತುಂಬ ಪಶ್ಚಾತ್ತಾಪ ಪಟ್ಟಿದ್ದಾಳಲ್ಲ" ಎಂದನು.

"ಕ್ಷಮಿಸಿರಿ. ನಿಮಗೆ ನನ್ನ ಒಳ್ಳೆಯತನ ಹಿಡಿಸಿರ ಬಹುದು. ಆದರೆ ನಿಮ್ಮ ಮಗಳ ಬುದ್ಧಿ ನನಗೇನೂ ಹಿಡಿಸಲಿಲ್ಲ. ಚಂದವಿಲ್ಲದಿದ್ದರೂ ರಂಗಿಯ ಗುಣ ನನಗೆ ಹಿಡಿಸಿದೆ. ಮಲತಾಯಿ ಕಾಡುವಳೆಂದು ಗೊತ್ತಿದ್ದು ಕೂಡಾ ಆ ಸರ ತನ್ನದಲ್ಲವೆಂದು ನನಗೇ ತಂದುಕೊಟ್ಟಳು. ನಿಮ್ಮ ಮಗಳು ಅದೇ ಸರವನ್ನು ನನ್ನ ಚೀಲದಿಂದ ಕದ್ದು, ನಾನು ಬಹುಮಾನ ಕೊಟ್ಟೆ ನೆಂದು ಹೇಳಿ ನನ್ನನ್ನು ಸಿಗಿಸಿ ಹಾಕಿದಳು. ಇಬ್ಬರಿಗೂ ಎಷ್ಟು ಭೇದ ! ಆ ಧನಿಕರು ಕೊಟ್ಟ ಹಣದಿಂದ ಏನಾದರೂ ವ್ಯಾಪಾರ ಮಾಡಿಕೊಂಡು, ರಂಗಿ ಒಪ್ಪಿದರೆ ಅವಳನ್ನೇ ಮದುವೆಯಾಗುತ್ತೇನೆ" ಎಂದ ಶ್ರೀಹರಿ. ಅವನ ಮಾತಿನಲ್ಲಿರುವ ನಿಜವನ್ನು ತಿಳಿದು ವೀರಾಸ್ವಾಮಿ ಸುಮ್ಮನಾದನು.





# ಸಾಮತಿ ಶಾಮಣ್ಣ

ಒಬ್ಬ ಗುರುವಿನ ಬಳಿಯಲ್ಲಿ ಶಾಮಣ್ಣನೆಂಬ ವಿದ್ಯಾರ್ಥಿಯಿದ್ದ. ಅವನು ಹನ್ನೆರಡು ಅವರ್ಷಗಳವರೆಗೆ ಆ ಗುರುವಿನ ಹತ್ತಿರವಿದ್ದು ವಿದ್ಯಾಭ್ಯಾಸ ಮಾಡಿದರೂ ಯಾವ ಶಾಸ್ತ್ರದಲ್ಲಿಯೂ ಅವನಿಗೆ ಪ್ರಾವೀಣ್ಯತೆಯುಂಟಾಗಲಿಲ್ಲ. ಆದರೆ ಅವನಲ್ಲಿ ಒಂದು ವಿಶೇಷವಿದ್ದಿತು. ತಾನು ಕೇಳಿದ ಯಾವುದೇ ಗಾದೆ, ಸಾಮತಿ, ಲೋಕೋಕ್ತಿಗಳನ್ನು ಮತ್ತೆ ಮತ್ತೆ ಉರು ಹಾಕಿಕೊಳ್ಳುತ್ತಾ ನೆನಪಿಟ್ಟುಕೊಳ್ಳುವನು. ಅವುಗಳಲ್ಲಿರುವ ಲೋಕಜ್ಞಾನವು ಅವನ ಮಿದುಳಿನಲ್ಲಿ ಬೆರೆತುಕೊಂಡಿದ್ದುವು. ಬೇರೆ ಯಾವುದರಲ್ಲಿಯೂ ಶ್ರದ್ಧೆಯಿಲ್ಲದ ಅವನಿಗೆ ಗುರುಗಳು, ಸಾಮತಿಗಳನ್ನೂ ಲೋಕೋಕ್ತಿಗಳನ್ನೂ ಹೆಚ್ಚಾಗಿಯೇ ಕಲಿಸಿ ಕೊಟ್ಟಿದ್ದರು.

ಹೀಗೆ ವಿದ್ಯೆ ಮುಗಿಸಿ ಹಿಂದಿರುಗಿ ಮನೆಗೆ ಬಂದ ಅವನನ್ನು ನೋಡಿ ಎಲ್ಲರೂ ಸಂತೋಷ ಪಟ್ಟರು. ಆದರೆ ತನ್ನ ಜೀವನವನ್ನು ನಡೆಯಿಸಲಿಕ್ಕೆ ಯಾವ ವೃತ್ತಿಯನ್ನು ಕೈಕೊಳ್ಳಬೇಕೆಂಬುದು ಅವನಿಗೆ ಗೊತ್ತಿರಲಿಲ್ಲ. ಯಾವ ವೃತ್ತಿಗೂ ಉಪಯೋಗವಾಗುವಂತಹ ಓದು ಅವನು ಓದಿರಲಿಲ್ಲ. ಆದುದರಿಂದ ಅವನು ಊರಲ್ಲಿ ಸುಮ್ಮನ ತಿರುಗುತ್ತ, ಊರಿನವರಿಗೆ ಸಂದರ್ಭೋಚಿತವಾಗಿ ಸಾಮತಿಗಳ ಮೂಲಕ ಆಲೋಚನೆ ಹೇಳುತ್ತಿದ್ದನು.

ಲಕ್ಷ್ಮೀಪತಯ್ಯ ಎಂಬ ದೊಡ್ಡ ರೈತರೊಬ್ಬರು ಒಳ್ಳೇ ಬೆಳೆ ತೆಗೆದು ತುಂಬಾ ಹಣ ಸಂಪಾದನೆ ಮಾಡಿದ್ದರು. ಅವರ ಹೆಂಡತಿ ನಗಗಳನ್ನು ಮಾಡಿಸಬೇಕೆಂದು ಆಶೆ ಪಟ್ಟಳು. ಇಂತಹ ಆಲೋಚನೆ ಬಂದಾಗ ಊರವರು ಶಾಮಣ್ಣನ ಆಲೋಚನೆ ಕೇಳುವುದು ಇತ್ತೀಚೆಗೆ ವಾಡಿಕೆಯಾಗಿತ್ತು. ಲಕ್ಷ್ಮೀಪತಯ್ಯ ತನ್ನ ಹೆಂಡತಿಯ ಆಶೆಯನ್ನು ಶಾಮಣ್ಣನ ಹತ್ತಿರ ಹೇಳಿ, "ನಗ ಮಾಡಿಸುವುದು ಒಳ್ಳೆಯದೋ ಕೆಟ್ಟುದೋ ?" ಎಂದು ಕೇಳಿದರು.

"ನನ್ನನ್ನು ಕೇಳಿದರೆ ಹೆಂಗುಸರಿಗೆ ನಗ ಮಾಡಿಸಿ ಹಾಕುವುದು ಒಳ್ಳೆಯದೇ ಅನ್ನುತ್ತೇನೆ. ಅಂದಕ್ಕಾಗಿ ಹಾಕಿದ ನಗನಟ್ಟುಗಳು, ಆಪತ್ತಿನಲ್ಲಿ ಕಾಪಾಡುತ್ತವೆ" ಎಂದನು ಶಾಮಣ್ಣ.

ಲಕ್ಷ್ಮೀಪತಯ್ಯ ಆ ಪ್ರಕಾರವೇ ತನ್ನ ಹೆಂಡತಿಗೆ ನಗಗಳನ್ನು ಮಾಡಿಸಿ ಹಾಕಿದರು. ಮುಂದೆ ಎರಡೇ ತಿಂಗಳಲ್ಲಿ ಲಕ್ಷ್ಮೀಪತಯ್ಯನ ಮನೆಗೆ ಬೆಂಕಿಹಿಡಿದು,

ಪಠಾಣ್ ಖಾದರ್‌ವಲೀಖಾನ್

ಎಲ್ಲಾ ಭಸ್ಮವಾಗಿ ಉಟ್ಟಬಟ್ಟೆಯಲ್ಲಿ ಉಳಿದರು. ಹೆಂಡತಿಯ ಶರೀರದ ಮೇಲಿರುವ ನಗಗಳೇ ದಕ್ಕಿದುವು. ಅದನ್ನು ಮಾರಿ ಲಕ್ಷ್ಮೀಪತಯ್ಯ ಮತ್ತೆ ಮನೆ ಕಟ್ಟಿಕೊಂಡರು.

ಶಾಮಣ್ಣನ ಆಲೋಚನೆಯೇ ಲಕ್ಷ್ಮೀಪತಯ್ಯನನ್ನು ಕಾಪಾಡಿತೆಂದು ಎಲ್ಲರಿಗೂ ತಿಳಿದು ಹೋಯಿತು. ಆಮೇಲೆ ಊರೊಳಗಿರುವವರು ತಮ್ಮ ಸಮಸ್ಯೆಗಳಿಗೆ ಶಾಮಣ್ಣನ ಹತ್ತಿರ ಬಂದು ಆಲೋಚನೆ ಕೇಳತೊಡಗಿದರು. ಅದರಿಂದ ಅವರಿಗೆ ಲಾಭಗಳೂ ಬರತೊಡಗಿದುವು. ಅಂಥವರಲ್ಲಿ ಕೆಲವರು ಅವನಿಗೆ ಬಹುಮಾನ ಕೂಡಾ ಕೊಡುತ್ತಿದ್ದರು. ಆದರೆ ಅವನಿಗೆ ಧನ ಸಂಪಾದನೆಗಿಂತಲೂ ಕೀರ್ತಿಯೇ ಹೆಚ್ಚಾಗಿ ಬರುತ್ತಿತ್ತು.

ಒಂದುಸಾರಿ ಆ ದೇಶದ ರಾಜನ ಮೇಲೆ ಒಬ್ಬ ಸಾಮಂತರಾಜನು ಬಂಡಾಯವೆದ್ದನು. ರಾಜನು ಸ್ವಲ್ಪ ಸೇನೆಯೊಂದಿಗೆ ಅವನ ಮೇಲೆ ಯುದ್ಧಕ್ಕೆ ಹೊರಟನು. ದಾರಿಯಲ್ಲಿ ಶಾಮಣ್ಣನ ಗ್ರಾಮದಲ್ಲೇ ಒಂದು ದಿನ ಮಜಿಲೀ ಹಾಕಿಕೊಂಡನು. ಆ ಸಮಯದಲ್ಲಿ ರಾಜನು ಆ ಊರಿನ ದೊಡ್ಡವರೊಂದಿಗೆ ಮಾತಾಡುತ್ತ ಶಾಮಣ್ಣನನ್ನೂ ನೋಡಿದನು. "ಚಿಕ್ಕವನಾದರೂ ಒಳ್ಳೇ ಅನುಭವಶಾಲಿ ಹುಡುಗ" ಎಂದು ಯಾರೋ ಅವನ ಪರಿಚಯ ಮಾಡಿಸಿದರು. ಯುದ್ಧವನ್ನು ಕುರಿತು ಶಾಮಣ್ಣನ ಅಭಿಪ್ರಾಯವೇನೆಂದು ರಾಜನು ಕೇಳಿದನು.

"ಮಹಾರಾಜರೇ, ಚಿಕ್ಕಹಾವನ್ನಾದರೂ ದೊಡ್ಡ ಕೋಲಿನಿಂದ ಹೊಡೀಬೇಕಂತೆ. ತಾವು ಇನ್ನಷ್ಟು ಸೈನ್ಯ ತರಿಸಿಕೊಂಡು ಹೋದರೆ ಒಳ್ಳೇದು" ಎಂದ ಶಾಮಣ್ಣ. ರಾಜನು ಇನ್ನಷ್ಟು ಸೈನ್ಯವನ್ನು ಕಳುಹಿಸಬೇಕೆಂದು ರಾಜಧಾನಿಗೆ ಸುದ್ದಿ ಕಳುಹಿಸಿ, ತನ್ನೊಂದಿಗಿರುವ ಸೈನ್ಯದಿಂದ ರಾಜನು ಮುಂದಕ್ಕೆ ಸಾಗಿದನು. ಸಾಮಂತರಾಜನು ರಾಜನೊಂದಿಗಿರುವ ಬಲವೆಷ್ಟೆಂಬುದನ್ನು ಚಾರರಿಂದ ತಿಳಿದು, ಅದನ್ನು ಇದಿರಿಸುವಷ್ಟು ಬಲವನ್ನು ಸಿದ್ಧಪಡಿಸಿಕೊಂಡು ಯುದ್ಧಕ್ಕೆ ಬಂದನು.

ಆ ಸಾಮಂತನ ರಭಸಕ್ಕೆ ರಾಜನಿಗೆ ಸೋಲುವ ಪರಿಸ್ಥಿತಿ ಏರ್ಪಟ್ಟಿತು. ಅದೇ ಸಮಯದಲ್ಲಿ ರಾಜಧಾನಿಯಿಂದ ಹೊಸ ಸೈನ್ಯವು ಬಂದ ಕೂಡಲೇ, ಆ ಸಾಮಂತರಾಜನು ಸೋತು ಶರಣಾಗಿ ರಾಜನ ಕಾಲಿಗೆ ಬಿದ್ದನು.

ವಿಜಯಶಾಲಿಯಾದ ರಾಜನು ರಾಜಧಾನಿಗೆ ತಿರುಗಿ ಬಂದ ಕೂಡಲೇ ಶಾಮಣ್ಣನನ್ನು ಕರೆಯಿಸಿ ಪ್ರಶಂಸಿಸಿ ಸತ್ಕರಿಸಿ ಬಹುಮಾನ ಇತ್ತುದು ಮಾತ್ರವಲ್ಲದೆ, ತನ್ನ ಮಂತ್ರಿ ಮಂಡಲಿಯಲ್ಲಿ ಆಲೋಚನೆ ಹೇಳುವವನನ್ನಾಗಿ ನಿಯಮಿಸಿಕೊಂಡನು.



# ಅರ್ಥವಿಲ್ಲದುದು

ಒಬ್ಬ ರಾಜನು ಎಲ್ಲಿಗೋ ಪರ್ಯಟನೆ ಮಾಡುತ್ತಾ, ಒಂದು ಗುಡ್ಡಗಾಡು ಪ್ರಾಂತದಲ್ಲಿ ಮಜಿಲೀ ಹಾಕಿದ್ದನು. ಆಗಲೇ ಅವನ ಹುಟ್ಟುಹಬ್ಬದ ದಿನವೂ ಬಂದಿತ್ತು. ಸುತ್ತಮುತ್ತಲಿನ ಗ್ರಾಮಗಳಲ್ಲಿದ್ದ ಪ್ರಮುಖರು, ಕಾಣಿಕೆಗಳೊಂದಿಗೆ ಬಂದು ರಾಜನ ದರ್ಶನ ಮಾಡಿ, ಜಯಜಯಾಕಾರ ಮಾಡಿ ಹೋಗುತ್ತಿದ್ದರು. ಆಗ ಒಬ್ಬ ಕಾಡು ಮನುಷ್ಯನು, "ಅರಣ್ಯದಲ್ಲಿರುವ ಒಬ್ಬ ತಪಸ್ವಿ ಕೊಟ್ಟ ಕಾಣಿಕೆ" ಎಂದು ಹೇಳಿ ಒಂದು ಗಂಟನ್ನು ರಾಜನ ಮುಂದಿಟ್ಟನು. ಅದರೊಳಗೆ ಸ್ವಲ್ಪ ಮಣ್ಣು, ಒಂದು ನೀರಿನ ಹೂಜಿ, ಕಲ್ಲುಗಳ ತುಂಡುಗಳು, ಕುದುರೆಯ ಕೂದಲು, ತೆಂಗಿನಕಾಯಿ ಇಷ್ಟು ವಸ್ತುಗಳಿದ್ದುವು.

ಕೂಡಲೇ ರಾಜನು ಒಂದು ಮೂಟೆ ಚಿನ್ನದ ನಾಣ್ಯಗಳನ್ನು ತೆಗೆದುಕೊಂಡು ಪರಿವಾರದೊಂದಿಗೆ ಆ ಮುನಿಯ ಬಳಿಗೆ ಹೋಗಿ, ಗಂಟನ್ನು ಮುನಿಯ ಮುಂದಿಟ್ಟು ನಮಸ್ಕಾರ ಮಾಡಿದನು. ಮುನಿ ಅದನ್ನು ಮುಟ್ಟಿ "ಈ ಪ್ರಾಂತದ ಅಭಿವೃದ್ಧಿಗೆ ಉಪಯೋಗಿಸು" ಎಂದನು.

ಇದನ್ನು ನೋಡಿ ಗ್ರಾಮದ ದುರಾಶೆಯವನೊಬ್ಬ, ಒಂದು ಗಂಟಿನಲ್ಲಿ, ಒಣಕಟ್ಟಿಗೆ ಚೂರು, ಮರಳು, ಒಣ ಹುಲ್ಲು, ಒಂದು ಸಾರಾಯಿ ಬುಡ್ಡಿ ಇಟ್ಟು ತಂದು ರಾಜನಿಗೆ ಸಮರ್ಪಿಸಿದನು.

"ಇವುಗಳಿಗೆ ಅರ್ಥವೇನು ?" ಎಂದು ಕೇಳಿದ ರಾಜ.

"ಆ ಮುನಿ ಕಳುಹಿಸಿದ ಕಾಣಿಕೆಗೆ ತಾವು ಅರ್ಥ ಕೇಳಿಲ್ಲವಲ್ಲಾ ?" ಎಂದ ಗ್ರಾಮದವ.

"ಅದರ ಅರ್ಥ ನನಗೆ ಗೊತ್ತಾಯಿತು. ಮಣ್ಣೂ, ನೀರೂ, ಚೆನ್ನಾಗಿದ್ದು, ಕಲ್ಲಿನ ಕೋಟೆ ಗಟ್ಟಿಯಾಗಿದ್ದು, ಒಳ್ಳೆಯ ಕುದುರೆಗಳ ಸೈನ್ಯವಿದ್ದು, ನಾನು ನೋಡುವವರಿಗೆ ತೆಂಗಿನಕಾಯಿಯಂತೆ ಕಠಿಣವಾಗಿದ್ದರೂ, ಒಳಗಿರುವ ಕಾಯಿ, ನೀರು, ಹಾಲುಗಳಂತೆ ಹೃದಯದವನಾಗಿರುವಂತೆ ಮುನಿ ಆಶೀರ್ವದಿಸಿದ್ದಾರೆ. ನೀನು ತಂದುದರ ಅರ್ಥ ತಿಳಿಯಲಿಲ್ಲ" ಎಂದ ರಾಜ.

ಆ ಮನುಷ್ಯ ರಾಜನ ಕಾಲಿಗೆ ಬಿದ್ದು ಕ್ಷಮಾಪಣೆ ಕೇಳಿದ.

—"ಸುನಂದ"





# ಅಜ್ಞಾತಕವಿ

ಅನೇಕ ವರ್ಷಗಳ ಹಿಂದೆ ಶ್ರೀಪುರದಲ್ಲಿ ರಾಜಶೇಖರ ಎಂಬವನು, ಯಾರಿಗೂ ತಿಳಿಯದಂತಹ ಕವಿಯಾಗಿದ್ದನು. ಅವನು ಜನ್ಮತಃ ಕವಿದೃಷ್ಟಿ ಉಳ್ಳವನಾಗಿ, ಸಹಜ ಕವಿಯಾಗಿ ಬೆಳೆದುದರಿಂದ ತನ್ನ ಪ್ರತಿಭೆ ಎಷ್ಟರ ಮಟ್ಟಿನದೆಂಬುದು ಅವನಿಗೆ ಗೊತ್ತಿರಲಿಲ್ಲ. ಅವನು ಹತ್ತು ವರ್ಷಗಳವರೆಗೆ ನಿರ್ವಿರಾಮವಾಗಿ ಒಂದು ರಸವಂತವಾದ ಕಾವ್ಯವನ್ನು ರಚಿಸಿ ಮುಗಿಸಿದನು.

ಅದು ಹೇಗಿದೆ ಎಂದು ತಿಳಿಯಲು ನಾಗಭೂಷಣನೆಂಬ ಪ್ರಖ್ಯಾತನಾದ ಕವಿಯ ಬಳಿಗೆ ಅದನ್ನು ತೆಗೆದುಕೊಂಡು ಹೋದನು.

"ಅಯ್ಯಾ, ಈ ಕಾವ್ಯವನ್ನು ನಾನು ರಚಿಸಿದ್ದೇನೆ. ಇದರಲ್ಲಿ ಕಾವ್ಯ ಲಕ್ಷಣಗಳು ಹೇಗಿವೆ ಎಂಬುದನ್ನು ತಾವು ನೋಡಿ ಹೇಳಬೇಕು. ನೀವು ಪ್ರೋತ್ಸಾಹ ಕೊಟ್ಟರೆ ನಾನು ಕವಿತ್ವದಲ್ಲಿ ಇನ್ನೂ ಏನಾದರೂ ರಚಿಸುತ್ತೇನೆ. ಇಲ್ಲದ ಪಕ್ಷದಲ್ಲಿ ಕವಿತಾ ವ್ಯಾಸಂಗವನ್ನು ಬಿಟ್ಟು ಬೇರೇನಾದರೂ ಮಾಡಲು ಮನಸ್ಸು ಮಾಡುತ್ತೇನೆ" ಎಂದು ರಾಜಶೇಖರನು ನಾಗಭೂಷಣನೊಂದಿಗೆ ಹೇಳಿದನು.

ನಾಗಭೂಷಣನು ಆ ಕಾವ್ಯವನ್ನು ಅಲ್ಲಲ್ಲಿ ಓದಿ ಆಶ್ಚರ್ಯಪಡತೊಡಗಿದನು. ರಾಜಶೇಖರನಂತಹವನು ಸಾಧಾರಣದ ಕವಿತೆ ಬರೆಯುವವನೆಂದು ಕೂಡಾ ಯಾರಿಗೂ ತಿಳಿಯದು. ಅಂತಹವನು ಇಂತಹ ಅದ್ಭುತ ಕವಿತೆ ಬರೆಯಬಲ್ಲನೆಂದು ಯಾರೂ ಊಹಿಸುವಂತಿಲ್ಲ. ಆದುದರಿಂದ ಈ ಕಾವ್ಯವನ್ನು ತಸ್ಕರಿಸಿಕೊಂಡು, ಸಂದರ್ಭ ಬಂದಾಗ ರಾಜನಿಗೆ ತೋರಿಸಿ, ದೊಡ್ಡ ಬಹುಮಾನ ಪಡೆಯಬಹುದೆಂದು ನಾಗಭೂಷಣನಿಗೆ ದುರ್ಬುದ್ಧಿ ಹುಟ್ಟಿತು.

"ಇದನ್ನು ಮನಸ್ಸುಗೊಟ್ಟು ಓದಿ ನನ್ನ ಅಭಿಪ್ರಾಯ ತಿಳಿಸುತ್ತೇನೆ. ಹದಿನೈದು ದಿನಗಳ ಅನಂತರ ಬಾರಪ್ಪ" ಎಂದು ಹೇಳಿ ನಾಗಭೂಷಣನು ರಾಜಶೇಖರನನ್ನು ಕಳುಹಿಸಿಬಿಟ್ಟನು. ಆಮೇಲೆ ಒಂದೇ ಸಮನೆ ತನ್ನ ಕೈಯಿಂದ ಆ ಕಾವ್ಯವನ್ನು ನಕಲು ತೆಗೆಯಲು ಕುಳಿತನು.

ಹದಿನೈದು ದಿನಗಳ ಮೇಲೆ ರಾಜಶೇಖರನು ಅವನಬಳಿಗೆ ಹೋಗಿ, "ನನ್ನ ಕಾವ್ಯವನ್ನು ಇಷ್ಟರಲ್ಲಿ ಓದಿ ಮುಗಿಸಿರಬೇಕು, ಏನು ನಿಮ್ಮ ಅಭಿಪ್ರಾಯವೆಂದು ತಿಳಿಯಲು ಬಂದೆ" ಎಂದನು.

ಎಂ. ಡಿ. ಅಬ್ದುಲ್ಲಾ

ನಾಗಭೂಷಣನು ಆಶ್ಚರ್ಯ ನಟಿಸುತ್ತ "ಕಾವ್ಯವೇ ? ಎಂತಹ ಕಾವ್ಯ ? " ಎಂದು ಕೇಳಿದನು.

"ಎರಡು ವಾರಗಳ ಹಿಂದೆ ನಾನು ಸ್ವತಃ ಬಂದು, ಹತ್ತು ವರ್ಷಗಳಿಂದ ಬರೆದು ಮುಗಿಸಿದ ಕಾವ್ಯ ಗ್ರಂಥವನ್ನು ನಿಮಗೆ ಕೊಟ್ಟು ಅಭಿಪ್ರಾಯ ತಿಳಿಸಿರಿ ಅಂದೆನಲ್ಲಾ ? ಮರೆತಿರೇನು ? " ಎಂದ ರಾಜಶೇಖರ.

"ಮರೆಯಲಿಕ್ಕೇನಾದರೂ ಇದ್ದರೆ ತಾನೇ ? ನೀನೇನಾದರೂ ಕನಸು ಗಿನಸು ಕಂಡೆಯೇನು ? ನೀನು ಇಲ್ಲಿಗೆ ಬರಲೂ ಇಲ್ಲ, ಕಾವ್ಯಗ್ರಂಥ ನನಗೆ ಕೊಡಲೂ ಇಲ್ಲ. ಅಸಂದರ್ಭವಾಗಿ ಮಾತಾಡ ಬಾರದು" ಎಂದು ನಾಗಭೂಷಣನು ದಬಾಯಿಸಿ ಹೇಳಿದನು.

"ನೀವು ದೊಡ್ಡ ಕವಿಗಳಾಗಿದ್ದು, ಇನ್ನೊಬ್ಬ ಕವಿಗೆ ಹೀಗೆ ಅನ್ಯಾಯ ಮಾಡಬಾರದು. ಇದೇನೂ ಚೆನ್ನಾಗಿಲ್ಲ" ಎಂದ ರಾಜಶೇಖರ ದೀನವಾಣಿಯಲ್ಲಿ.

"ನೀನು ನನ್ನ ಹತ್ತಿರ ಕಾವ್ಯಗ್ರಂಥ ಕೊಟ್ಟೆನೆಂದು ಕನಸಿನ ಮಾತು ಹೇಳುವೆಯಲ್ಲಾ ? ಅದರ ಮೇಲೆ ನಾನು ಸುಳ್ಳು ಹೇಳುವೆನೆನ್ನುವೆ. ನೀನು ಕೊಡು ವಾಗ ಯಾರಿದ್ದರು ಇಲ್ಲಿ ? ಅವರನ್ನಾದರೂ ಕರೆದು ವಿಚಾರಿಸೋಣ" ಎಂದ ನಾಗಭೂಷಣ ಯಾವ ಸಾಕ್ಷಿಗಳೂ ಇಲ್ಲವೆಂಬ ಧೈರ್ಯದಲ್ಲಿ.

"ಯಾರೂ ಇಲ್ಲ" ಎಂದ ರಾಜಶೇಖರ

"ಹಾಗಿದ್ದರೆ ಸುಮ್ಮನೆ ಗಳಹಬೇಡ. ಹೋಗು. ನನಗೂ ಕೆಲಸವಿದೆ" ಎಂದ ನಾಗಭೂಷಣ.

ರಾಜಶೇಖರನು ಮಾರಣೇದಿನ ರಂಗ ಭೂಪಾ ಮಹಾರಾಜನ ಆಸ್ಥಾನಕ್ಕೆ ಹೋಗಿ ತನ್ನ ಗೋಳನ್ನು ಬಿನ್ನವಿಸಿಕೊಂಡನು. ರಾಜನು ಅವನ ಮಾತುಗಳನ್ನು ಸಹಾನುಭೂತಿಯಿಂದ ಕೇಳಿದನು.

ಬಳಿಕ ರಾಜನು ಭಟರನ್ನು ಕರೆದು, "ನಾಗ ಭೂಷಣ ಕವಿಯ ಬಳಿಗೆ ಹೋಗಿ, ಇತ್ತೀಚೆಗೆ ಬರೆದ ಹೊಸ ಕಾವ್ಯವನ್ನು ತೆಗೆದುಕೊಂಡು ಬರಲು ಹೇಳಿರಿ." ಎಂದು ಕಳುಹಿಸಿದನು. ನಾಗಭೂಷಣನು ಆ ಕರೆಯನ್ನು ಕೇಳಿ ಬಹಳ ಸಂತೋಷದಿಂದ ಕಾವ್ಯ ದೊಂದಿಗೆ ಆಸ್ಥಾನಕ್ಕೆ ಬಂದನು. ಅಲ್ಲಿ ರಾಜಶೇಖರ



ನನ್ನು ನೋಡಿ ಅವನಿಗೆ ಜುಮ್ಮೆನಿಸಿತು. ಆಗ ರಾಜನು ಅವನೊಡನೆ ರಾಜಶೇಖರನ ದೂರನ್ನು ಕುರಿತು ಹೇಳಿ, "ಇದಕ್ಕೇನು ಹೇಳುವೆ ?" ಎಂದು ಕೇಳಿದನು.

"ಇವನ ಸಂಗತಿ ನನಗೊಂದೂ ತಿಳಿಯದು. ತಾವು ಈ ಕಾವ್ಯವನ್ನು ಪರಾಂಬರಿಸಬೇಕು." ಎಂದು ತಾನು ತಂದ ಕಾವ್ಯಗ್ರಂಥವನ್ನು ರಾಜನಿಗೆ ಕೊಟ್ಟನು. ರಾಜನು ರಾಜಶೇಖರನ ಕೈ ಬರೆಹವನ್ನೂ, ನಾಗಭೂಷಣನ ಕೈ ಬರೆಹವನ್ನೂ ಹೋಲಿಸಿ ನೋಡಿದನು. ರಾಜಶೇಖರನು ಆ ಕಾವ್ಯವನ್ನು ಅಲ್ಲಲ್ಲಿ ನೋಡಿ, "ಮಹಾರಾಜರೇ, ಇದು ನನ್ನದೇ ಕಾವ್ಯ. ಇವರ ಕೈಯಿಂದ ಬರೆಯಲ್ಪಟ್ಟಿದೆ. ನನ್ನ ಗ್ರಂಥವು ಹದಿನೈದು ದಿನಗಳವರೆಗೆ ಇವರ ಮನೆಯಲ್ಲಿತ್ತು" ಎಂದನು.

ರಾಜನೂ ಅದನ್ನು ಅಲ್ಲಲ್ಲಿ ನೋಡಿದನು. ಆ ಗ್ರಂಥವು ಶ್ರೀರಾಮಚಂದ್ರನಿಗೆ ಅಂಕಿತ ಮಾಡಿರುವುದನ್ನು ಗಮನಿಸಿ ರಾಜನು, "ಕವಿಗಳೇ, ಈ ಮಧುರ ಕಾವ್ಯವನ್ನು ರಚಿಸಿದ್ದು ನಿಮ್ಮಿಬ್ಬರಲ್ಲಿ ಯಾರೆಂದು ತಿಳಿಯದಿದ್ದರೂ, ಇದನ್ನು ನನಗೆ ಯಾರು ಅಂಕಿತ ಮಾಡಿಕೊಡುವಿರೋ ಅವರನ್ನು ತಕ್ಕ ರೀತಿಯಲ್ಲಿ ಗೌರವಿಸುತ್ತೇನೆ" ಎಂದನು. ಕೂಡಲೇ ನಾಗಭೂಷಣನು ಉತ್ಸಾಹದಿಂದ, "ಖಂಡಿತವಾಗಿ ತಮಗೆ ಅಂಕಿತ ಮಾಡುತ್ತೇನೆ. ಅದಕ್ಕಿಂತ ಹೆಚ್ಚಿನದೇನು ಬೇಕಾಗಿದೆ ಪ್ರಭುಗಳೇ ?" ಎಂದನು.

"ನಿನ್ನ ಅಭಿಪ್ರಾಯ ಏನು ?" ಎಂದು ರಾಜನು ನಾಗಭೂಷಣನನ್ನು ಕೇಳಿದನು.

"ಕ್ಷಮಿಸಿರಿ ಮಹಾರಾಜರೆ, ನನ್ನ ಇಷ್ಟ ದೈವವಾದ ಶ್ರೀರಾಮಚಂದ್ರನಿಗೆ ಅದನ್ನು ಅಂಕಿತ ಮಾಡಿದ್ದೇನೆ. ಅದನ್ನು ರಾಜಾಸ್ಥಾನದಲ್ಲಿ ಓದಿ ಬಹುಮಾನಪಡೆಯಲಿಕ್ಕಾಗಿ ನಾನು ಬರೆಯಲಿಲ್ಲ. ಕೀರ್ತಿಯ ಆಕಾಂಕ್ಷೆಯೂ ನನಗಿಲ್ಲ" ಎಂದು ರಾಜಶೇಖರನು ನಿಃಸಂಕೋಚವಾಗಿ ಹೇಳಿದನು.

ಈ ಮಾತನ್ನು ಕೇಳಿ ರಂಗಭೂಪಾಲನು ಪರವಶಾನಂದಗೊಂಡು, ನಾಗಭೂಷಣನ ಮನೆಯನ್ನು ಶೋಧಮಾಡಿಸಿ ಅಸಲು ಗ್ರಂಥವನ್ನು ಹುಡುಕಿ ತರಲು ಭಟರಿಗೆ ಆಜ್ಞೆ ಮಾಡಿದನು. ನಾಗಭೂಷಣನು ಹೆದರಿ ರಾಜನ ಕಾಲಿಗೆ ಬಿದ್ದು ತಾನು ಮಾಡಿದ ತಪ್ಪನ್ನು ಒಪ್ಪಿಕೊಂಡು ಕ್ಷಮಿಸಬೇಕೆಂದು ಬೇಡಿದನು. ರಾಜನು ಅವನನ್ನು ಸಭೆಯಲ್ಲಿ ನಿಂದಿಸಿ ಬುದ್ಧಿ ಹೇಳಿ ಕಳುಹಿಸಿ, ತುಂಬಿದ ಸಭೆಯಲ್ಲಿ ರಾಜಶೇಖರನನ್ನು ಬಹುಮಾನಿಸಿ, ಅವನ ಪ್ರತಿಭೆ ಬಯಲಾಗುವಂತೆ ಮಾಡಿದನು. ತನ್ನ ಗ್ರಂಥ ತನ್ನ ಕೈಗೆ ಸಿಕ್ಕಿದುದೇ ದೊಡ್ಡ ಬಹುಮಾನವೆನಿಸಿತ್ತು, ರಾಜಶೇಖರನಿಗೆ.





# ಬಯಲಾದ ಮೋಸ

ಒಂದಾನೊಂದು ಗ್ರಾಮದಲ್ಲಿ ಬಹಳ ಕಾಲದ ಹಿಂದೆ ಒಬ್ಬ ಮಾಂತ್ರಿಕನಿದ್ದನು. ನಿಜಕ್ಕೂ ಅವನಲ್ಲಿ ದೊಡ್ಡ ದೊಡ್ಡ ಮಂತ್ರಶಕ್ತಿಗಳೊಂದೂ ಇಲ್ಲದಿದ್ದರೂ, ತನ್ನ ಮಾತು, ರೀತಿ, ವೇಷ ತಂತ್ರ ಮೊದಲಾದ ಪ್ರಜ್ಞೆಗಳಿಂದ ಜನರನ್ನು ಹೆದರಿಸಿ ಆ ಮೂಲಕ ಲಾಭಪಡೆಯುತ್ತ ಜೀವನಯಾತ್ರೆ ಮಾಡಿಕೊಂಡಿದ್ದನು.

ಅದೇ ಗ್ರಾಮದಲ್ಲಿ ಪ್ರಭಾಕರನೆಂಬ ಯುವಕನೊಬ್ಬನಿದ್ದನು. ಅವನು ನಗರದಲ್ಲಿ ಕಲಿತು ಬಂದವನಾದುದರಿಂದ ಮಂತ್ರಮಾಯಗಳಲ್ಲಿ ನಂಬುಗೆ ಇಲ್ಲದವನಾಗಿದ್ದ. ಎಲ್ಲರೂ ಆ ಮಾಂತ್ರಿಕನಿಗೆ ಹೆದರಿ ಅವನು ಕೇಳಿದ್ದು ಕೊಡುವುದನ್ನು ನೋಡಿ ಅವನಿಗೆ ರೋಸಿಕೆಯಾಗುತಿತ್ತು. ಈ ಮಾಂತ್ರಿಕನ ಅಟಾಟೋಪದ ಸತ್ಯಾಸತ್ಯತೆಯನ್ನು ನೋಡಿಯೇ ಬಿಡಬೇಕೆಂದು ಅವನಿಗೆ ತೋರಿತು.

ಒಂದು ದಿನ ಮಾಂತ್ರಿಕನು ಎಲ್ಲರ ಮನೆಗೆ ಹೋಗಿ ಕೇಳುವಂತೆ ಪ್ರಭಾಕರನ ಮನೆಗೆ ಬಂದು, ತನಗೆ ಆರು ತಿಂಗಳಿಗೆ ಸರಿಪಡುವ ಹಾಗೆ ಅಕ್ಕಿಬೇಳೆ, ಎಣ್ಣೆ ಸಾಂಬಾರವಸ್ತು ಬೇಕೆಂದು ಮನೆಯ ಹೆಂಗುಸರ ಹತ್ತಿರ ಬಹಳ ಜೋರಿನಿಂದ ಕೇಳಿದನು. ಆ ಹೀನಮನುಷ್ಯನು ಕೇಳುವುದು ಭಿಕ್ಷೆಯಾದರೂ, ಅವನ ಅಧಿಕಾರವನ್ನೂ, ದರ್ಪವನ್ನೂ, ರೀತಿಯನ್ನೂ ನೋಡಿ ಪ್ರಭಾಕರನಿಗೆ ಕೋಪವು ಜ್ವಲಿಸಿತು. ಅವನು ಹೊರಗೆ ಬಂದು ಹೆಂಗುಸರನ್ನು ಒಳಗೆ ಕಳುಹಿಸಿ, ಮಂತ್ರವಾದಿಯೊಂದಿಗೆ "ದುಷ್ಟನೇ ! ಆರು ತಿಂಗಳಿಗಲ್ಲ, ಆರು ಹೊತ್ತಿಗೆ ಕೂಡಾ ಇಲ್ಲೇನೂ ದೊರಕದು. ಜನರನ್ನು ಹೆದರಿಸಿ ಕೋಣನ ಹಾಗೆ ಮೈ ಬೆಳಿಸಿದ್ದೀಯಾ ? ಮಾತಾಡದೆ ನಡೆ ! ಇಲ್ಲದಿದ್ದರೆ ಕುತ್ತಿಗೆಗೆ ಕೈಹಾಕುತ್ತೇನೆ !" ಎಂದನು ಉದ್ರೇಕದಿಂದ.

ಮಾಂತ್ರಿಕನು ಅವನನ್ನು ಕಣ್ಣುರುಳಿಸಿ ನೋಡುತ್ತ, "ನನ್ನ ಸಂಗತಿ ನಿನಗೆ ಗೊತ್ತಿಲ್ಲ ! ನೋಡು ! ನಾಳೆ ಈ ಹೊತ್ತಿಗೆ ಏನಾಗುತ್ತೋ ನೋಡು !" ಎಂದು ತನ್ನ ಸಹಜ ಧೋರಣೆಯಲ್ಲಿ ಬೆದರಿಸಿ, ದಂಡದಿಂದ ನೆಲವನ್ನು ಕುಟ್ಟಿಕುಟ್ಟಿ ಹೊರಟುಹೋದನು.

ಪ್ರಭಾಕರನು ಬಹಳ ದಿನದಿಂದ ಕಾದುಕೊಂಡಿದ್ದುದಕ್ಕೆ ತಕ್ಕ ಕಾಲವು ಈಗ ಬಂದಿತ್ತು. ಅವನು ತನ್ನ ನಾಲ್ಕುಮಂದಿ ಮಿತ್ರರನ್ನು ಕೂಡಿಕೊಂಡು ಮಾಂತ್ರಿ

ಕೆ. ನಾಗಮಣಿ

ಕನ ಭಂಡಾರವನ್ನು ಬೀದಿಗೆಳೆಯ ತಕ್ಕಂತಹ ಒಂದು ಯೋಚನೆಯನ್ನು ಅವರಿಗೆ ಹೇಳಿದನು. ಅವನ ಮಿತ್ರರು ಅವನು ಹೇಳಿದಂತೆ ಮಾಡಲು ಒಪ್ಪಿಕೊಂಡರು.

ಮರುದಿನ ಬೆಳಿಗ್ಗೆ ಪ್ರಭಾಕರನು ತಟಪಟ ತುಳ್ಳುತ್ತಾ ಎರಡು ಮೂರು ಸಾರಿ ವಾಂತಿ ಮಾಡಿಕೊಂಡು ಬಿದ್ದುಬಿಟ್ಟನು. ನೆರೆಕರೆಯವರೆಲ್ಲಾ ಓಡಿ ಬಂದರು. ಇದೇನೆಂದು ಕೇಳಲು ಪ್ರಭಾಕರನ ಮಿತ್ರರು, "ಇದೆಲ್ಲಾ ಆ ಮಾಂತ್ರಿಕನ ಕೆಲಸ. ಅವನಿಗೆ ಇವನೇನೋ ಬೈದಿದ್ದಾನೆ. ಆದಕ್ಕೇ ಅವನೇನೋ ಮಾಡಿದ್ದಾನೆ. ಈಗ ಅವನನ್ನೇ ಕರೆಸಿ ಇವನನ್ನು ಗುಣಪಡಿಸಬೇಕಾಗಿದೆ" ಎಂದರು.

ನಾಲ್ಕಾರು ಮಂದಿ ಕೂಡಿ ಮಾಂತ್ರಿಕನ ಬಳಿಗೆ ಹೋಗಿ, "ಏನಯ್ಯಾ, ನೀನು ಆ ಹುಡುಗನಿಗೆ ಮಾಟ ಮಾಡಿ ರೋಗಬರಿಸಿದೆಯಲ್ಲಾ? ಇದೇನೂ ಚೆನ್ನಾಗಿಲ್ಲ. ಬಂದು ಅವನಿಗೆ ಗುಣವಾಗುವ ಹಾಗೆ ಮಾಡು" ಎಂದರು.

"ಅವರವರು ಮಾಡಿದ ಕೆಲಸಕ್ಕೆ ಅವರವರೇ ಶಿಕ್ಷೆ ಅನುಭವಿಸುತ್ತಾರೆ. ಮಧ್ಯೆ ನಾನೇನು ಮಾಡಿದೆ?" ಎಂದ ಮಾಂತ್ರಿಕ ತಾತ್ಸಾರದಿಂದ.

"ನಿನ್ನಿಂದಲೇ ಅವನಿಗೇನೋ ಆಗಿದೆ. ನಾಳೆ ಈ ಹೊತ್ತಿಗೆ ಏನಾಗುತ್ತೋ ನೋಡು ಅಂತ ನಿನ್ನೆ ಹೇಳಿದೆಯಷ್ಟೆ? ಒಳ್ಳೆಯದರಲ್ಲಿ ಬಂದು ಗುಣಪಡಿಸುವೆಯಾ, ಕೈಗೆ ಕೋಳಹಾಕಿ ಒಯ್ಯಬೇಕೋ?" ಎಂದು ಪ್ರಭಾಕರನ ಸ್ನೇಹಿತರು ಮಾಂತ್ರಿಕನನ್ನು ಹಿಡಿದೆಳೆದು ನಾಲ್ಕು ಬಿಸಿಬಿಸಿಯಾಗಿ ಬಾರಿಸಿದರು.

ಮಾಂತ್ರಿಕನು ಹೆದರಿ, "ಅಯ್ಯೋ! ನಾನೇನೂ ಮಾಡಿಲ್ಲ. ನನಗೆ ಯಾವ ಮಂತ್ರವೂ ಗೊತ್ತಿಲ್ಲ. ಸುಮ್ಮನೆ ಹೆದರಿಸಿದೆ ಅಷ್ಟೇ! ಈ ಹೊಟ್ಟೇಪಾಡಿಗೆ! ನನ್ನನ್ನು ಬಿಡಿ!" ಎಂದು ದೀನನಾಗಿ ಬೇಡಿದ.

ಅಷ್ಟರಲ್ಲಿ ಅಲ್ಲಿಗೇ ಬಂದ ಪ್ರಭಾಕರನು, "ಈಗ ನಿಜ ಹೇಳಿದೆ. ನಿನಗೆ ಏನೂ ಗೊತ್ತಿಲ್ಲ. ಮಂತ್ರಗಳೂ ಬಾರವು. ಮಂತ್ರಶಕ್ತಿ ಅದಕ್ಕಿಂತ ಮೊದಲೇ ಇಲ್ಲ. ಅವೆಲ್ಲಾ ಇರುವವನ ಹಾಗೆ ಲೋಕವನ್ನು ಮೋಸಪಡಿಸಲಿಕ್ಕೆ ಕಲಿತಿರುವೆ. ಅದು ಎಷ್ಟು ದಿನ ನಡೆದೀತು? ಅದಕ್ಕೇ ನಿನಗೆ ಬುದ್ಧಿ ಹೇಳಬೇಕಾಗಿ ಬಂತು. ಇನ್ನುಮುಂದೆ ಮಂತ್ರದ ಮಾತು ಹೇಳಿ ಹೆದರಿಸಿ ಏನಾದರೂ ಕೇಳಿದರೆ ಹಲ್ಲುಮುರಿದು ಕೈಗೆ ಕೊಟ್ಟೇನು. ಎಲ್ಲರಂತೆ ದುಡಿದುತಿನ್ನಲು ಕಲಿ" ಎಂದು ಎಚ್ಚರಿಕೆ ಹೇಳಿದನು.

ಈ ಸಮಾಚಾರ ಸುತ್ತಲಿನ ಊರಿಗೂ ಗೊತ್ತಾಯಿತು. ಆಮೇಲೆ ಅವನನ್ನು ನೋಡಿ ಹೆದರುವವರು ಯಾರೂ ಇಲ್ಲ.



# ರಾಕ್ಷಸನಾದ ರಾಜ



ಅನೇಕ ಸಾವಿರ ವರ್ಷಗಳ ಕೆಳಗೆ ಸೌದಾಸ ನೆಂಬ ರಾಜನು ಅರಣ್ಯ ಮಾರ್ಗದಲ್ಲಿ ನಡೆಯುತ್ತಿರುವಾಗ, ಶಕ್ತಿ ಎಂಬ ಯುವಕ ತಪಸ್ವಿ ಇದಿರಾದನು.



"ನಾನು ರಾಜ, ನನಗೆ ದಾರಿ ಬಿಡು" ಎಂದ ಸೌದಾಸ. ಒಬ್ಬ ತಪಸ್ವಿಗೆ ನೀನೇ ದಾರಿ ಬಿಡಬಾರದೇನು ?" ಎಂದು ಶಕ್ತಿ ಕೇಳಿದ. ರಾಜನು ಕೋಪದಿಂದ ತಪಸ್ವಿಯನ್ನು ಹೊಡೆದ.



"ನಿನ್ನಂಥವನು ರಾಜನಾಗುವುದು ಬಿಟ್ಟು ಮನುಷ್ಯನಾಗಿರಲಿಕ್ಕೂ ಯೋಗ್ಯನಲ್ಲ. ರಾಕ್ಷಸನಾಗು" ಎಂದು ಶಕ್ತಿ ಸೌದಾಸನಿಗೆ ಶಪಿಸಿದ.



ಮರದ ಮೇಲಿದ್ದ ಒಂದು ಬ್ರಹ್ಮರಾಕ್ಷಸವು ತಪಸ್ವಿಯ ಶಾಪವಾಕ್ಯವನ್ನು ಕೇಳಿ ರಾಜನನ್ನು ಆವಹಿಸಿಕೊಂಡಿತು. ಅದನ್ನು ತಡೆಯಲು ರಾಜನಿಂದಾಗಲಿಲ್ಲ.

ರಾಜನು ಭಯದಿಂದ ಓಡತೊಡಗಿದ. ಅವನ ಮುಖವು ಭಯಂಕರವಾಗಿ ಬದಲಾವಣೆಗೊಂಡಿತು. ಅರಣ್ಯ ಮಧ್ಯದಲ್ಲಿ ಒಂದು ಕುಟೀರ ಸೇರುವಾಗ ಅವನು ಪೂರ್ತಿ ರಾಕ್ಷಸನಾದ.





ಆ ಕುಟೀರವು ಮತ್ತ್ಯಾರದೂ ಅಲ್ಲ, ಶಕ್ತಿಯದೇ. ಭಯಂಕರ ರಾಕ್ಷಸನಾದ ಸೌದಾಸನು ಶಕ್ತಿಯನ್ನು ಹಿಡಿದು ನುಂಗಿಬಿಟ್ಟನು.

ರಾಕ್ಷಸನ ಸಿಟ್ಟು ಅಲ್ಲಿಗೆ ತೀರಲಿಲ್ಲ. ಶಕ್ತಿಗೆ ಅರಣ್ಯದಲ್ಲಿ ನೂರು ಮಂದಿ ಸಹೋದರರಿದ್ದರು. ಸೌದಾಸನು ಅವರನ್ನೆಲ್ಲಾ ಹುಡುಕಿ ಹಿಡಿದು ನುಂಗಿಬಿಟ್ಟನು.





ಶಕ್ತಿಯೂ ಅವನ ಸೋದರರೂ ವಸಿಷ್ಠನ ಕುಮಾರರು. ವಸಿಷ್ಠನು ತನ್ನ ಮಗಂದಿರ ದುರ್ಗತಿಯನ್ನು ಕೇಳಿ ತುಂಬಾ ದುಃಖಿಸಿ ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಬಗೆದನು.

ವಸಿಷ್ಠನು ಪ್ರಾಣತ್ಯಾಗ ಮಾಡಲು ಒಂದು ನದಿಯಲ್ಲಿ ಹಾರಿದನು. ಕೂಡಲೇ ನದಿ ನೂರು ಶಾಖೆಗಳಾಗಿ ಸೀಳಿ ವಸಿಷ್ಠನು ಮುಳುಗುವಷ್ಟು ನೀರು ಎಲ್ಲಿಯೂ ಇಲ್ಲದಂತಾಯಿತು. ಆ ನದಿಯ ಹೆಸರು "ಶತದ್ರು."





ವಸಿಷ್ಠನು ಮತ್ತೊಂದು ನದಿಗೆ ಹೋಗಿ ಹಾರಿದನು. ಆಗ ಈಜಲಾಗದಂತೆ ಕೈಗಳನ್ನು ಕಟ್ಟಿಕೊಂಡಿದ್ದನು. ನದೀ ದೇವತೆ ಅವನ ಕಟ್ಟುಗಳನ್ನು ಬಿಚ್ಚಿ ಅವನನ್ನು ದಡಕ್ಕೆ ದೂಡಿ ಬಿಟ್ಟಳು. ಆ ನದಿಗೆ "ವಿಪಾಶ" ಎಂಬ ಹೆಸರು ಬಂತು.



ವಸಿಷ್ಠನು ಮನೆಗೆ ಹಿಂದಿರುಗುತ್ತ, ತನ್ನ ಹಿಂದೆ ಯಾರೋ ವೇದಪಠನ ಮಾಡುವುದನ್ನು ಕೇಳಿ ತಿರುಗಿ ನೋಡಿದನು. ಅವನ ಹಿಂದೆ ಶಕ್ತಿಯ ಹೆಂಡತಿ ಬರುತ್ತಿದ್ದಳು. ಅವಳ ಗರ್ಭದೊಳಗಿನ ಶಿಶು ವೇದಪಠನ ಮಾಡುತಿತ್ತು. ತನ್ನ ವಂಶ ಉಳಿದಿರುವುದಕ್ಕೆ ವಸಿಷ್ಠನು ಸಂತೋಷಿಸಿದನು.



ಬೇಗದಲ್ಲೇ ರಾಕ್ಷಸನು ವಸಿಷ್ಠನನ್ನೇ ನುಂಗಲು ಬಂದನು. ವಸಿಷ್ಠನು ಅವನನ್ನು ನಿರ್ಮೂಲಿಸ ಬಲ್ಲವನಾದರೂ, ತನ್ನ ಕಮಂಡಲೋದಕವನ್ನು ಅವನ ಮೇಲೆ ಚಿಮುಕಿಸಿ ಮತ್ತೆ ಸೌದಾಸ ನಾಗುವಂತೆ ಮಾಡಿದನು.



June 1978

# ಮಾಯಾಸರೋವರ

೨೯

[ಮಾಯಾಸರೋವರೇಶ್ವರನು ಜಯಶೀಲನನ್ನು ತನ್ನೊಂದಿಗೆ ಕರೆದೊಯ್ಯುವನೆಂದು ತಿಳಿದು ಸಿದ್ಧ ಸಾಧಕನು ಹೊರಡುವ ಸಮಯದಲ್ಲಿ, ಜಲವೃಕ ರಾಕ್ಷಸರ ಸಮಾಚಾರವು ಗೊತ್ತಾಯಿತು. ಕನಕಾಕ್ಷ ರಾಜನೂ, ಸಿದ್ಧಸಾಧಕನೂ ಮುಂದೆ ಹೋಗುವಾಗ ಜಲವೃಕರೊಂದಿಗೆ ಜಗಳಾಡಿಕೊಂಡಿರುವ ದೇವಶರ್ಮ ಮೊದಲಾದವರು ಕಂಡುಬಂದರು. ಓಡಿ ಹೋಗುವ ಜಲವೃಕರನ್ನು ನರಭಕ್ಷಕರು ಬೆಂಬತ್ತಿದರು.]

ನರಭಕ್ಷಕರು ಜಲವೃಕ ರಾಕ್ಷಸರ ಬೆಂಬತ್ತಿ ಓಡುವುದರಲ್ಲಿ ಅವರ ಹಸಿವೆ ತೀರಿಸಿಕೊಳ್ಳುವ ಒಂದೇ ಉದ್ದೇಶವಲ್ಲದೆ, ಬೇರೆ ಯಾವ ಶತ್ರುಭಾವನೆಯೂ ಅವರಿಗಿಲ್ಲ. ಎಲ್ಲಿ ಯಾರ ಹೆಣ ಬೀಳುತ್ತೋ ಎಂದು ಕೊಂಡು ಓಡುತ್ತಿರುವ ಅವರು ಯಾವ ದಾರಿ ಹಿಡಿದು ಆ ರಾಕ್ಷಸರು ಓಡುತ್ತಿದ್ದಾರೆಂಬುದನ್ನೂ ಗಮನಿಸಲಿಲ್ಲ. ಅದು ಅವರು ಈವರೆಗೂ ನೋಡದ ಹೊಸ ದಾರಿ. ಅದರಲ್ಲಿ ಎಷ್ಟೋ ತಿರುವುಗಳು.

ಅಂತಹ ದಾರಿಯಲ್ಲಿ ಇಬ್ಬರು ಜಲವೃಕರು ಎಲೆಗಳಿಂದ ದಟ್ಟವಾದೊಂದು ಮರದ ಕೊಂಬೆಯಲ್ಲಿ ಕುಳಿತುಕೊಂಡು ಕೆಳಗೆ ನಡೆಯುವುದನ್ನು ನೋಡುತ್ತಿದ್ದರು. ಅವರಿಬ್ಬರನ್ನು ಹಾಗೆ ಗೂಢಚಾರಿಕೆ ಮಾಡುವಂತೆ ಕಳುಹಿಸಿದುದು, ಅವರ ಒಡೆಯನಾದ ಜಲವೃಕನಾಥನೇ.

ಮರದ ಮೇಲಿರುವ ಆ ಜಲವೃಕ ರಾಕ್ಷಸರಲ್ಲಿ ಒಬ್ಬನು ಇನ್ನೊಬ್ಬನೊಂದಿಗೆ, "ಎಲೋ, ನಮ್ಮ ರಾಜನಿಗೆ ಶತ್ರುವಿನ ಬಲ ಎಷ್ಟು ದೊಡ್ಡದಿರುವುದೆಂದೂ ಸರಿಯಾಗಿ ತಿಳಿದಂತಿಲ್ಲ. ಇದಕ್ಕೆ ಮೊದಲು ಸರೋವರೇಶ್ವರನ ಪಕ್ಷದವರನ್ನೆಲ್ಲಾ ಹೊಡೆದು ಓಡಿಸಿದ್ದೇವಾಗಲೀ, ಅವನಿಗೆ ಮತ್ತೆ ಕೆಲವರ ಸಹಾಯ



ವಿರುವಂತೆ ಕಾಣುತ್ತದೆ, ಮಾಯಾಸರೋವರದ ಕಡೆಗೆ ಹೊರಟಗುಂಪನ್ನು ನೋಡಿದೆಯಾ ?" ಎಂದನು.

ಮೊದಲನೆಯವನು ಹೇಳಿದ ಮಾತುಗಳನ್ನು ಎರಡನೆಯವನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಅವನ ದೃಷ್ಟಿ ಮಾಯಾಸರೋವರದ ಕಡೆಗೆ ಓಡುತ್ತಾ ಹೋಗುವವರನ್ನೇ ನೋಡಿಕೊಂಡಿತ್ತು. ಅದರ ಹಿಂದೆ ಓಡುತ್ತಿರುವ ನರಭಕ್ಷಕರನ್ನೂ, ಎಲ್ಲರಿಗಿಂತ ಹಿಂದೆ ಮರದ ಕಾಲಿನಿಂದ ಅಷ್ಟಷ್ಟುದೂರ ಹಾರಿಹಾರಿ ನಡೆದು ಬರುತ್ತಿದ್ದ, ಹಿರಣ್ಮಪುರದ ಸೇನಾಪತಿಯ ಮಗ ಮಂಗಳವರ್ಮನನ್ನೂ ಕುತೂಹಲದಿಂದ ನೋಡುತ್ತಿದ್ದನು.

ಒಮ್ಮಿಂದೊಮ್ಮೆಗೇ ಅವನು ತನ್ನ ಸಂಗಡಿಗನೊಂದಿಗೆ, "ಎಲೋ, ಆ ಕುಂಟನನ್ನು ಹಿಡಿದುಕೊಂಡು ಹೋಗಿ ನಮ್ಮ ಒಡೆಯರಿಗೆ ಒಪ್ಪಿಸಿದರೆ ಒಳ್ಳೆಯದಲ್ಲವೇ? ಬರೀ ಕಾವಲು ಕಾದು ಸಮಾಚಾರ ಹೇಳುವುದಕ್ಕಿಂತ ಇದೊಂದು ಕೆಲಸ ಮಾಡಿದರೇನು? ಇವನ ಬಾಯಿ ಬಿಡಿಸಿಬಿಟ್ಟರೆ ಹೊಸದಾಗಿ ಈ ಅರಣ್ಯಕ್ಕೆ ಬಂದ ರಾಜನೊಂದಿಗೆ ಎಷ್ಟೊಂದು ಬಳಗವಿದೆಯೆಂಬುದನ್ನೆಲ್ಲಾ ಲೆಕ್ಕ ತಪ್ಪದಂತೆ ತಿಳಿಯಬಹುದು. ಒಡೆಯನೂ ನಮ್ಮನ್ನು ಮೆಚ್ಚಿ ಸನ್ಮಾನಿಸುವನು," ಎಂದನು.

"ಅದೇನೋ ಚೆನ್ನಾಗಿಯೇ ಇದೆ. ಇಲ್ಲಿ ಎರಡು ಗುಂಪುಗಳಾಗಿ ಮಾಯಾಸರೋವರದ ಕಡೆಗೆ ಹೋಗುತ್ತಿರುವ ಶತ್ರುಗಳನ್ನೇನು ಮಾಡೋಣ? ಅವರು ಏನು ಮಾಡುವರೆಂಬುದನ್ನು ನಮ್ಮ ರಾಜನಿ[ಗೆ] ಮುಂದಾಗಿ ತಿಳಿಸಬೇಡವೇ? ನಮಗೆ ಒಪ್ಪಿಸಿ[ದ] ಕೆಲಸವನ್ನು ಅರ್ಧದಲ್ಲಿ ಬಿಟ್ಟುಹೋದರೆ ಅಧಿ[...] ಪ್ರಸಂಗ ಮಾಡಿದಿರೆಂದು ಕೋಪಿಸಲಾರನೆ?" ಎಂದು ಎರಡನೇ ಜಲವೃಕನು ಕೇಳಿದನು.

"ಆ ಕೆಲಸ ನೀನು ನೋಡಿಕೊಂಡಿರು. ಅವರು ಹೋಗುವುದು ಮಾಯಾಸರೋವರಕ್ಕೇ ಎಂಬುದು ನಿಜ. ಅದರಲ್ಲಿ ತಿಳಿಯಬೇಕಾದಂತಹ ರಹಸ್ಯವೇನಿದೆ ಅಷ್ಟೊಂದು ನೀನೊಬ್ಬನೇ ನೋಡಿಕೊಂಡಿರು. ನಾನು ಈ ಸೊಟ್ಟ ಹೇಳವನನ್ನು ಹೆಗಲಲ್ಲಿ ಹೊತ್ತುಕೊಂಡು ಹೋಗಿ ನಮ್ಮ ರಾಜನಿಗೆ ಒಪ್ಪಿಸಿಕೊಟ್ಟು ಬರುತ್ತೇನೆ" ಎಂದು ಹೇಳಿ ಮೊದಲನೇ ಜಲವೃಕ ರಾ[...]ಸನು ಸದ್ದು ಮಾಡದೆ ಮರದ ಕೊಂಬೆಯಿಂ[ದ] ಇಳಿದು, ಮಂಗಳವರ್ಮನ ಹಿಂದೆಯೇ ಹೊಂಚು ಹಾಕಿ ನಡೆಯತೊಡಗಿದನು.

ಮಂಗಳವರ್ಮನಿಗೆ ತನ್ನ ಬೆನ್ನ ಹಿಂದೆ ಗಂಡಾಂತ[ರ]ವಿರುವುದೆಂದು ಗೊತ್ತಾಗಲಿಲ್ಲ. ಆ ಬಗೆಯ ಅನು[...]ಮಾನವೂ ಅವನಿಗಿರಲಿಲ್ಲ. ಕಾಲುಗಳು ಸರಿಯಾಗಿರು[...]ವವರೂ, ಕುದುರೆಯ ಮೇಲಿರುವವರೂ ಗಡಿಬಿ[ಡಿ]ಯಲ್ಲಿ ತನ್ನನ್ನು ಮರೆತು, ಮಾಯಾಸರೋವರ[ದ] ಕಡೆಗೆ ಧಾವಿಸುತ್ತಿರಲು, ಅವನು ಎಷ್ಟು ದೊಡ್ಡ ಅಂಗಣ ಹಾಕಿದರೂ ಹಿಂದೆ ಬಿದ್ದಿದ್ದನು. ಸಾಧ್ಯ[...]ವಾದಷ್ಟು ಬೇಗ ಸರೋವರವನ್ನು ತಲಪಿ, ಯುದ್ಧ

ದಲ್ಲಿ ತಾನೂ ಭಾಗವಹಿಸಬೇಕೆಂಬ ತವಕದಲ್ಲಿ ನಡೆಯುತ್ತಲಿದ್ದನು. ಒಬ್ಬ ಮನುಷ್ಯನು ವೀರನು ಹೌದೋ ಅಲ್ಲವೋ ಎಂಬುದನ್ನು ನಿರ್ಣಯಿಸುವುದು, ಕೈಕಾಲು ಕತ್ತಿಗಳಲ್ಲ, ಗುಂಡಿಗೆಯ ಬಲವೇ.

ಮಂಗಳವರ್ಮನು ಹೀಗೆ ಆಲೋಚಿಸುತ್ತ ನಡೆಯುತ್ತಿರಲು, ಅವನ ಹಿಂದಿನಿಂದ ದೊಡ್ಡದೊಂದು ಶಬ್ದವಾಯಿತು, ಅವನು ತಟ್ಟನೆ ಹಿಂದಿರುಗಿ ನೋಡಿದನು. ಜಲವೃಕ ರಾಕ್ಷಸನು ಅವನನ್ನು ಹಿಂದಿನಿಂದ ಹಠಾತ್ತನೆ ಹಿಡಿಯಬೇಕೆಂದು ಹಾರುವ ಆತುರದಿಂದ, ಕಾಲ ಕೆಳಗಿನ ದಾರಿ ಹೇಗಿದೆ ಎಂಬುದನ್ನು ಗಮನಿಸಲಿಲ್ಲ. ಆದುದರಿಂದ ಫಕ್ಕನೆ ಅವನ ಬಲಗಾಲು ಆಳವಾದೊಂದು ನೆಲದ ಸೀಳಿನೊಳಗೆ ಸಿಕ್ಕಿಕೊಂಡಿತು. ಅವನು ಮುಂದಕ್ಕೆ ವಾಲಿಕೊಂಡನು. ಆಗ ಅವನ ಗದೆ ಕೆಳಗೆ ಬಿದ್ದು ದೂರಕ್ಕೆ ಉರುಳಿ ಹೋಯಿತು.

ಅವನು ದುಮ್ಮುಬಿಗಿದು ಕಾಲನ್ನು ಮೇಲಕ್ಕೆ ಎತ್ತಿಕೊಳ್ಳಲು ಪ್ರಯತ್ನಿಸಿದರೂ, ಆ ಎಳೆದಾಟದಲ್ಲಿ ಮೊಣಕಾಲು ಚೆನ್ನಾಗಿ ಉಳುಕಿ ನೋಯಿಸಿತು. ಆಗ ಅವನು ಆರ್ತದನಿಯಿಂದ, "ಹಾ! ಜಲವೃಕನಾಥಾ! ನಿನಗೇ ಶರಣು! ನಿನಗೆ ಒಳ್ಳೆಯದು ಮಾಡಲು ಹೋದೆ! ಹೀಗಾಯಿತು! ಕಾಪಾಡು!" ಎಂದು ಕೂಗಿದನು.

ತನಗೆ ಎಷ್ಟೊಂದು ಸ್ವಲ್ಪದರಲ್ಲಿ ಅಪಾಯವು ತಪ್ಪಿತೆಂಬುದು ಮಂಗಳವರ್ಮನಿಗೆ ಗೊತ್ತಾಯಿತು. ಅವನು ಆ ಜಲವೃಕನ ಬಳಿಗೆ ಹೋಗಿ, "ಎಲೋ ಘಾತಕನೇ! ಹೇಡಿಯಂತೆ ಹಿಂದಿನಿಂದ ನನ್ನನ್ನು ಹಿಡಿಯಲು ಬಂದುದು ಭೂಮಿತಾಯಿಗೆ ಸಹಿಸಲಿಲ್ಲ. ನಿನ್ನ ಕಾಲನ್ನು ಮುರಿದಳು. ಸರಿಯಾದ ಶಿಕ್ಷೆ. ಈಗ ನಿನಗೆ ಬೇಕಾದುದು ವೈದ್ಯ ಸಹಾಯ. ಎಲ್ಲಿಯೋ ಇರುವ ನಿನ್ನ ಜಲವೃಕನಾಥ ಬರುತ್ತಾನೇನು ನಿನಗೆ ಸಹಾಯ ಮಾಡಲು? ಇದಕ್ಕೆ ಮೊದಲು ನಿನ್ನ



ರಾಜ ಮಾಯಾಸರೋವರೇಶ್ವರನ ಭವನಗಳ ಮೇಲೆ ದಾಳಿ ಮಾಡಿಸಿ ಏನು ಕಟ್ಟಿಕೊಂಡ? ಯಾರು ಗೆದ್ದರು? ನಿಜ ಸಂಗತಿ ಹೇಳು. ನಾನು ನಿನಗೆ ಸಂಜೀವಿಯಂತಹ ಚಿಕಿತ್ಸೆಮಾಡಿ ನಿನ್ನ ಮುರಿದ ಕಾಲನ್ನು ಸರಿಗೊಳಿಸಿ ಸ್ವಲ್ಪಹೊತ್ತಿನೊಳಗೇ ನಡೆಯುವಂತೆ ಮಾಡುತ್ತೇನೆ." ಎಂದನು.

ಸಿಕ್ಕಿಕೊಂಡ ಜಲವೃಕನು ನೋವಿನ ಬಾಧೆಯಿಂದ ನರಳುತ್ತ ಏನೋ ಹೇಳಲು ಬಾಯಿ ತೆರೆದನು. ಅಷ್ಟರೊಳಗೆ ಇಲ್ಲಿ ನಡೆದುದನ್ನು ನೋಡಿಕೊಂಡೇ ಇದ್ದ ಅವನ ಸಂಗಡಿಗನಾದ ಜಲವೃಕನು ಕಲ್ಲಿನ ಗದೆಯನ್ನು ತಿರುಗಿಸುತ್ತ, ಕೂಗಿ ಹೆದರಿಸುತ್ತ, "ಎಲೋ ಮಾಯಾಸರೋವರೇಶ್ವರನ ಕುಂಟಬಂಟಾ! ಕಾಲೇಳದವನ ಮೇಲೆ ಪ್ರತಾಪ ತೋರಿಸುವಿಯಾ? ನಾನಿದ್ದೇನೆ! ನಿನ್ನನ್ನೀಗಲೇ ಯಮಲೋಕಕ್ಕೆ ಅಟ್ಟುತ್ತೇನೆ!" ಎನ್ನುತ್ತ ಬರತೊಡಗಿದನು. ಮಂಗಳವರ್ಮನು ಮಿಂಚಿನ ವೇಗದಲ್ಲಿ ತನ್ನ



ಊರುಗೋಲಿನ ಹಿಡಿಯನ್ನು ಸರ್ರನೆ ಮೇಲಕ್ಕೆ ಎಳೆದನು. ತಳತಳನೆ ಹೊಳೆಯುದ ಹದನಾದ ಕತ್ತಿ! ಅವನು ಆ ಕತ್ತಿಯನ್ನು ಕಾಲು ಸಿಕ್ಕಿಕೊಂಡ ಜಲವೃಕರಾಕ್ಷಸನ ಕಂಠದ ಮೇಲೆ ಇಟ್ಟು, ತನ್ನ ಬಳಿಗೆ ಬರುವ ಹರಾಮಿ ಜಲವೃಕನನ್ನು ನೋಡಿ, "ಎಲೋ ಕಿರಾತನೇ! ನಾನೀಗ ಒಂದರಿಂದ ಮೂರು ಹೇಳುವುದರೊಳಗೆ ನೀನು ಆ ಕಲ್ಲಿನ ಗದೆಯನ್ನು ದೂರ ಬಿಸುಟು, ಮೊಣಕಾಲಿನ ಮೇಲೆ ಅಂಬೆಗಾಲಿಕ್ಕಿಕೊಂಡು ಮುಂದೆ ಬರಬೇಕು. ತಪ್ಪಿದರೆ ನಿನ್ನ ಈ ಸಂಗಡಿಗನ ಕುತ್ತಿಗೆ ಕಡಿದುಬಿಡುತ್ತೇನೆ! ಆ ಮೇಲೆ ನಿನಗೂ ಅದೇಗತಿ! ಇಕೋ, ಒಂದು, ಎರಡು..." ಎಂದನು.

ಮಂಗಳವರ್ಮ ಮೂರು ಹೇಳುವುದರೊಳಗೆ ಆ ಜಲವೃಕನು ತಣ್ಣಗಾಗಿ ಕಲ್ಲು ಗದೆಯನ್ನು ದೂರ ಬಿಸುಟು, ಮೊಣಕಾಲು ಕೈಗಳನ್ನು ನೆಲಕ್ಕೆ ಊರಿ, "ಶರಣಾದೆ! ಶರಣಾದೆ! ಮಿತ್ರನನ್ನು ಕೊಲ್ಲಬೇಡ!" ಎಂದನು ನಡುಗುವ ಸ್ವರದಿಂದ ದೀನನಾಗಿ.

"ಆಹಾ! ನೀರು ತೋಳ ನೀಚರಾದರೂ ನಿಮ್ಮ ಸ್ನೇಹಧರ್ಮ ಮೆಚ್ಚುವಂತಿದೆ! ಒಳ್ಳೇದು. ನಾನು ನಿನ್ನ ಹಾಗೆ ಬಿದ್ದವನನ್ನು ಕೊಲ್ಲುವ ಆಲೋಚನೆಯ ಕ್ರೂರನಲ್ಲ! ನನ್ನ ಹಿಂದೆ ಬಾ. ನಿನಗೆ ಔಷಧೀ ಪತ್ರಗಳನ್ನು ತೋರಿಸುತ್ತೇನೆ." ಎಂದು ಹೇಳಿ ಮಂಗಳವರ್ಮನು ಸಮೀಪದಲ್ಲಿ ಒತ್ತೊತ್ತಾಗಿ ಬೆಳೆದಿದ್ದ ಸಣ್ಣ ಪುಟ್ಟ ಗಿಡಗಳ ರಾಶಿಯಕಡೆಗೆ ನಡೆದನು.

ಮಂಗಳವರ್ಮನು ಜಾಗರೂಕತೆಯಿಂದ ಪರಿಶೀಲಿಸಿ ಕೆಲವು ಹಣ್ಣೆಲೆಗಳನ್ನೂ, ಮತ್ತೆ ಕೆಲವು ಚಿಗುರುಗಳನ್ನೂ ಕೊಯಿದು, ಅವುಗಳನ್ನು ಅಂಗೈಯಲ್ಲಿಟ್ಟು ಮರ್ದಿಸಿ ಉಂಡೆಮಾಡಿ ಅದನ್ನು ಜಲವೃಕರಾಕ್ಷಸನಿಗೆ ಕೊಟ್ಟು, "ಇಕೋ, ಈ ಔಷಧವನ್ನು ನಿನ್ನ ಮಿತ್ರನ ಮೊಣಕಾಲಿಗೆ ಅಂಟಿಸಿ ಮೇಲೆ ಈ ದೊಡ್ಡ ಎಲೆಯನ್ನಿಟ್ಟು ಕಟ್ಟು. ಅವನೀಗ ಇರುವ ಸ್ಥಳದಲ್ಲಿಯೇ ಹನ್ನೆರಡು ಗಂಟೆ ಹೊತ್ತು ಇರಬೇಕು. ಹಾಗೆ ಮಾಡದೆ ಕದಲಿದನೆಂದರೆ, ಮೊಣಕಾಲಿನವರೆಗೆ ತುಂಡುಮಾಡಿ ಬಿಸಾಡಬೇಕಾಗುತ್ತದೆ. ನೆನಪಿರಲಿ ಇಬ್ಬರಿಗೂ." ಎಂದನು.

ಅವನ ಮಾತು ಕೇಳಿ ಜಲವೃಕರಾಕ್ಷಸರ ಮುಖಗಳಲ್ಲಿ ಅಳುವಿನ ಕಳೆ ಮೂಡಿತು. ಅವರು ಈ ಕಾಡಿನಲ್ಲಿ ಏನೋ ಮುಖ್ಯವಾದ ಕೆಲಸದಲ್ಲಿ ಇರಬೇಕೆಂದೂ, ಕೇಳಿದರೆ ಹೇಳಲಾರರೆಂದೂ ಮಂಗಳವರ್ಮನು ಊಹಿಸಿದನು. ಅವರನ್ನು ಹೆಚ್ಚು ಪೀಡಿಸಿ ಪ್ರಯೋಜನವಿಲ್ಲವೆಂದುಕೊಂಡು ಮಂಗಳವರ್ಮನು ಮುಂದಕ್ಕೆ ಕದಲಿದನು.

ಅವನು ಸ್ವಲ್ಪಕಾಲದವರೆಗೆ ಮಾಯಾಸರೋವರದಲ್ಲಿ ವಾಸಮಾಡಿದವನಾದುದರಿಂದ, ಅಲ್ಲಿಗೆ ಹೋಗುವ ಸಮೀಪದ ದಾರಿ ಯಾವುದೆಂಬುದು ಅವನಿಗೆ ಗೊತ್ತಿತ್ತು. ಆದರೆ ಮರದಕಾಲನ್ನು ಎತ್ತಿಕೊಂಡು ಏರು ತಗ್ಗುಗಳ ದಾರಿಯಲ್ಲಿ ನಡೆಯುವುದೇ





ಅವನಿಗೆ ಬಹಳ ಪ್ರಯಾಸದ ಕಾರ್ಯವಾಗಿತ್ತು. ಮಂಗಳವರ್ಮನು ಕುಂಟುತ್ತಾ ಐದಾರು ನಿಮಿಷಗಳಷ್ಟು ದಾರಿ ನಡೆದನು. ಅಷ್ಟರಲ್ಲಿ ಆಕಾಶದಷ್ಟೆತ್ತರವಾದೊಂದು ಮರದ ಮೇಲಿನಿಂದ, "ಮಂಗಳವರ್ಮಾ!" ಎಂಬ ಆರ್ತವಾದ ಕರೆಯುವ ಕಂಠಸ್ವರವು ಅವನನ್ನು ನಿಲ್ಲಿಸಿತು.

ಇದು ಯಾವ ರೂಪದ ವೃಕ್ಷಪಿಶಾಚಿಯೋ ಎಂದುಕೊಂಡು ಮಂಗಳವರ್ಮನು ತಲೆಯೆತ್ತಿ ನೋಡಿದನು. ಒಂದು ದೊಡ್ಡ ಮರದ ತುತ್ತ ತುದಿಯ ಭಾಗದಲ್ಲಿ ಬಲೆಯಂತೆ ಕಾಡು ಬಳ್ಳಿಗಳಿಂದ ಹೆಣೆಯಲಾದ ಉಯ್ಯಾಲೆಯಂತಹ ಜಾಲದಲ್ಲಿ ಒಬ್ಬ ಮನುಷ್ಯನು ನರಳುತ್ತಿರುವುದನ್ನು ನೋಡಿದನು. ಅವನು ಮಾಯಾಸರೋವರೇಶ್ವರನ ಹಂಸರಥವನ್ನು ಓಡಿಸುವ ಸಾರಥಿಯೇ ಎಂದು ಗೊತ್ತಾಯಿತು. ಹಂಸರಥವು ಆಕಾಶದಲ್ಲಿ ತಲೆಕೆಳಗಾಗಿ ಹೋಗಲು, ಅದರೊಳಗಿನಿಂದ ಅವನು ಜಾರಿ ಆ ಮರದ ಮೇಲಿನ ಕಾಡುಬಳ್ಳಿಗಳ ಬಲೆಯೊಳಗೆ ಸಿಕ್ಕಿ ಪ್ರಾಣ ಹಿಡಿದುಕೊಂಡ [illegible] ಉಳಿದಿದ್ದನು. "ಓಹೋ! ನೀನೋ ಹಂಸರಥ ಸಾರಥೀ! ಇಲ್ಲಿ ಸಿಕ್ಕಿಕೊಂಡು ಇಷ್ಟರವರೆಗೆ ಬದುಕಿಕೊಂಡಿರುವೆಯಾ? ಇಷ್ಟು ಕೆಳಗಿರುವ ನನ್ನ ಗುರುತು ಹಿಡಿದು ಕರೆಯುವಷ್ಟು ಶಕ್ತಿಯೂ ತಿಳಿವೂ ಇದೆಯೆಂದಾಯಿತು." ಎಂದು ಕೂಗಿ ಹೇಳಿದನು.

"ಮಾಯಾಸರೋವರೇಶ್ವರನ ದಯೆ!" ಎಂದು ಚೀರಿದ ಮೇಲಿನವ. "ಇದ್ದೀತಿದ್ದೀತು! ಯಾರು ಯಾವುದನ್ನು ನಂಬುವರೋ ಅದೇ ದೇವರು. ಬಹಳ ಸಂತೋಷ. ನಿನಗೆ ಕೆಳಗೆ ಬರಲು, ಯಾವ ಕೊಂಬೆರೆಂಬೆಗಳ ಆಧಾರವೂ ಸಿಗಲಿಲ್ಲವೇ? ಹೆಳವನಾಗಿರುವ ನಾನು ಯಾವ ರೀತಿಯ ಸಹಾಯ ಮಾಡುವುದೋ ಗೊತ್ತಾಗುವುದಿಲ್ಲವಲ್ಲಾ!" ಎಂದು ಕೇಳಿದ ಮಂಗಳವರ್ಮ.

"ಅದೋದೋ! ಸ್ವಲ್ಪ ಮೆಲ್ಲನೆ ಮಾತಾಡು ಮಂಗಳವರ್ಮಾ! ಅಲ್ಲಿ ಯಮಕಿಂಕರನ ಹಾಗೆ ಯಾವನೋ ಒಬ್ಬ ಭಯಂಕರವಾದ ನರವಾನರದ





ಮೇಲೆ ಕುಳಿತು ಇತ್ತಕಡೆಗೇ ಬರುತ್ತಿದ್ದಾನೆ. ಅವನ ಹಿಂದೆ ಕೆಲಮಂದಿ ಸೈನಿಕರೂ ಇದ್ದಾರೆ. ನಮ್ಮ ಶತ್ರುಗಳಾದ ಜಯಶೀಲನ ಕಡೆಯವರೇ ಆಗಿರಬೇಕು. ಗುಡ್ಡದಂಥ ನರವಾನರದ ಮೇಲಿರುವವನೇ ಸಿದ್ಧಸಾಧಕ ಎಂಬ ಘೋರ ಮಂತ್ರಗಾರನಾಗಿರಬೇಕು. ಅವನ ಕಣ್ಣಿಗೆ ಬಿದ್ದರೆ ತೀರೇಹೋಯಿತು!" ಎಂದನು.

ಆ ಮಾತು ಕೇಳಿ ಮಂಗಳವರ್ಮನಲ್ಲಿ ಉತ್ಸಾಹ ಪೆದ್ದಿತು. ಹಾಗಿದ್ದರೆ ಆ ಗುಂಪಿನಲ್ಲಿ ವೈದ್ಯದೇವನೆಂದು ಕರೆಯಲ್ಪಡುವ ದೇವಶರ್ಮ ಕೂಡಾ ಇರಬಹುದು. ಈಗ ಅವರೊಂದಿಗೆ ಕೂಡಿ ಸಾಧ್ಯವಾದಷ್ಟು ಬೇಗದಲ್ಲಿ ಮಾಯಾಸರೋವರವನ್ನು ತಲಪಬಹುದು.

ಹೀಗಂದುಕೊಂಡು ಮಂಗಳವರ್ಮನು, "ಹಾಗಿದ್ದರೆ ಅವರನ್ನು ನೋಡಿ ನಾವು ಹೆದರಬೇಕಾಗಿಲ್ಲ. ಅವರು ಶತ್ರುಗಳೇನಲ್ಲ. ಮಿತ್ರರು ಹೌದೋ ಅಲ್ಲವೋ ಎಂಬುದೂ ಸರಿಯಾಗಿ ತಿಳಿಯದು. ಮಾಯಾಸರೋವರೇಶ್ವರನು ಜಯಶೀಲ ಎಂಬವನನ್ನು ಹಿಡಿದುಕೊಂಡು ಸರೋವರದಕಡೆಗೆ ಹೋಗಿದ್ದಾನೆಂದು ಗೊತ್ತಾಗಿದೆ. ನಿನಗೆ ಕಾಣುವ ಆ ಗುಂಪಿನಲ್ಲಿ ನಮ್ಮವನೇ ಆದ ವೈದ್ಯದೇವನೂ ಇರುತ್ತಾನೆ. ನಾನು ಒಂಟಿಕಾಲಿನಲ್ಲಿ ಮರದ ಮೇಲೆ ಹತ್ತಲು ಸಾಧ್ಯವಿಲ್ಲ. ನಿನಗೊಬ್ಬನಿಗೆ ಕೆಳಗಿಳಿಯಲಿಕ್ಕೂ ಆಗದು. ಹೆದರಬೇಡ. ಅಲ್ಲಿ ಬರುವವರು ಸಹಾಯಕರೆಂದೇ ತಿಳಿದು ಗಟ್ಟಿಯಾಗಿ ಕೂಗಿ ಕೈ ತಟ್ಟಿ ಕರೆ." ಎಂದನು.

ನರವಾನರ ವಾಹನದ ಮೇಲೆ ಬರುವವನೊಂದಿಗೆ ವೈದ್ಯದೇವನಿರುವನೆಂದು ತಿಳಿದ ಕೂಡಲೇ ಅಂತರದಲ್ಲಿ ಸಿಕ್ಕಿಕೊಂಡ ಹಂಸರಥ ಸಾರಥಿಗೆ ಜೀವ ಚೇತರಿಸಿಕೊಂಡಿತು. ತಾನು ಈ ಬಳ್ಳಿಯ ಬಲೆಯಲ್ಲಿ ಇಂದು ಸಾಯುವೆನೋ ನಾಳೆ ಸಾಯುವೆನೋ ಎಂದು ಲೆಕ್ಕಹಾಕಿಕೊಂಡಿದ್ದವನಿಗೆ ಜೀವಿಸುವ ಆಶೆಯ ಬೆಳಕು ಮೂಡಿತು. ಇದುವರೆಗೆ ಯಾವ ಜಲವೃಕನೂ, ನರಭಕ್ಷಕನೂ ತನ್ನನ್ನು ನೋಡದೆ ಹೋದುದನ್ನು ನೆನೆದು ಸಂತೋಷಪಟ್ಟನು.

ಹಂಸರಥ ಸಾರಥಿ ತಾನಿರುವ ಮರಕ್ಕೆ ತುಸು ದೂರದಲ್ಲಿ ಹೋಗುತ್ತಿರುವ ಸಿದ್ಧಸಾಧಕ, ಕನಕಾಕ್ಷ ಮಹಾರಾಜ ಮೊದಲಾದವರಿಗೆ ಕೇಳಿಸುವಂತೆ ದೊಡ್ಡ ಕಂಠಸ್ವರದಿಂದ, "ಓಹೋಯ್ ಅಯ್ಯಗಳಿರಾ! ನನ್ನನ್ನು ಕಾಪಾಡಿರಿ! ಇಲ್ಲಿ-ಈ ಮರದ ಕೊಂಬೆಗಳ ನಡುವೆ ಕಾಡುಬಳ್ಳಿಗಳಲ್ಲಿ ಸಿಕ್ಕಿಕೊಂಡಿದ್ದೇನೆ. ಬನ್ನಿರೋ, ಹೀಗೆ ಬನ್ನಿ." ಎಂದು ಗಂಟಲು ಹರಿದು ಹೋಗುವಂತೆ ಕೂಗಿದನು,

ಅವನ ಕೂಗು ಮೊದಲು ಕೇಳಿಸಿದ್ದು ನರವಾನರದ ಹರಿತವಾದ ಕಿವಿಗಳಿಗೇ!

ಆ ಕೂಡಲೇ ಅದು ಗಕ್ಕನೆ ನಿಂತು ತಲೆಯೆತ್ತಿ ನೋಡುತ್ತ ಹೆಗಲ ಮೇಲಿದ್ದ ಸಿದ್ಧಸಾಧಕನಿಗೆ ಮೇಲೂ ಕೆಳಗೂ ಹುಬ್ಬು ಹಾರಿಸುತ್ತ ಸನ್ನೆ ಮಾಡ

…ೂಡಗಿತು. ಆಗ ಮರದಲ್ಲಿ ಸಿಕ್ಕಿಕೊಂಡವನು …ುತ್ತೊಂದು ಸಾರಿ ಕೂಗಿದನು. ಅದು ಎಲ್ಲರ …ಿಗೂ ಬಿದ್ದಿತು.

ದೇವಶರ್ಮನು ಬೇಗಬೇಗನೇ ಮುಂದಕ್ಕೆ ಬಂದು, "ಆ ಕೂಗು ಮಾಯಾಸರೋವರೇಶ್ವರನ ಹಂಸರಥದ ಸಾರಥಿಯ ಹಾಗಿದೆ. ಅವನು ಈ ಪ್ರಾಂತದಲ್ಲೇ ರಥದಿಂದ ಬಿದ್ದಿದ್ದಾನೆ." ಎಂದನು.

"ಆಹಾ! ಹಾಗಾದರೆ ಅವನನ್ನು ಹಿಡಿದುಕೊಂಡು, ಅವನಿಂದ ಆ ಮಾಯಾಸರೋವರದ ಕಳ್ಳನ ರಹಸ್ಯವನ್ನು ಹೊರಗೆಳೆದು ಬಿಡುತ್ತೇನೆ. ಮೊದಲು ಜಯಶೀಲ ನನ್ನ ಕಣ್ಣಿಗೆ ಬೀಳಲಿ. ಆ ಮೇಲೆ ಈ ಗಂಪನ್ನೆಲ್ಲಾ ಮರಗಳಿಗೆ ಕಟ್ಟಿ ಮಹಾಕಾಲನಿಗೆ ಬಲಿಕೊಟ್ಟುಬಿಡುತ್ತೇನೆ." ಎಂದು ಸಿದ್ಧಸಾಧಕನು ನರವಾನರವನ್ನು ಜೋರಾಗಿ ಮುಂದಕ್ಕೆ ಹುರುಡಿಸಿದನು.

ನರವಾನರವು ಬೇಗಬೇಗನೆ ಓಡಿ ಬಂದು ಹಂಸರಥ ಸಾರಥಿ ಸಿಕ್ಕಿಬಿದ್ದ ಮರದಕೆಳಗೆ ನಿಂತಿತು. ಮಂಗಳವರ್ಮನು ಸಾಧಕನ ಮುಂದೆ ಬಂದು, "ಸಾಧಕಾ, ನೀನು ಹೇಗಾದರೂ ಮಾಡಿ ಅಲ್ಲಿ ಬಳ್ಳಿಗಳ ಹಂದರದಲ್ಲಿ ಸಿಕ್ಕಿ ಒದ್ದಾಡುವವನನ್ನು ಕೆಳಗಿಳಿಸಬೇಕು. ಅದು ಹೇಗೆ ಸಾಧ್ಯವೆಂಬುದು ನನಗಂತೂ ಗೊತ್ತಾಗುವುದಿಲ್ಲ" ಎಂದನು.

ಸಿದ್ಧಸಾಧಕನು "ಜೈ ಮಹಾಕಾಳಾ!" ಎಂದು ಕೂಗಿ "ಅವನನ್ನು ಇಳಿಸುವುದೇನೂ ದೊಡ್ಡ ಕೆಲಸವಲ್ಲ. ನನಗೂ ಇದೆಲ್ಲಾ ಸಿಕ್ಕು ಸಿಕ್ಕಾಗಿ ಕಾಣುತ್ತದೆ. ಸರಿಯಾಗಿ ಅರ್ಥವಾಗುವುದಿಲ್ಲ. ಮಾಯಾಸರೋವರೇಶ್ವರ ಎಂಬ ಧೂರ್ತನು ಕನಕಾಕ್ಷ ಮಹಾರಾಜರ ಮಕ್ಕಳನ್ನು ಅಪಹರಿಸಿದ್ದರ ಮೇಲೆ ಈಗ ನನ್ನ ಮಿತ್ರನಾದ ಜಯಶೀಲನನ್ನೂ ಹಿಡಿದುಕೊಂಡು ಹೋಗಿದ್ದಾನೆ. ಅಂತಹ ದುಷ್ಟನ ಪರಿಚಯದವರಾದ ನೀವೆಲ್ಲ ಅವನ ಮೇಲೆ ಸ್ನೇಹದಿಂದ ಮಾತಾಡುತ್ತಿದ್ದೀರಿ. ಏನಿದು?"

ದೇವಶರ್ಮನು ಅವನನ್ನು ಶಾಂತ ಪಡಿಸುತ್ತ, "ಸಿದ್ಧಸಾಧಕಾ, ಈಗ ನಮಗೂ ಮಾಯಾ



ಸರೋವರೇಶ್ವರನಿಗೂ ಎಲ್ಲರಿಗೂ ಅಪಾಯಕರವಾದ ಶತ್ರುಗಳು. ಆ ಸರೋವರದ ಮತ್ತೊಂದು ಪ್ರಾಂತದಲ್ಲಿರುವ ಜಲವೃಕ ರಾಕ್ಷಸರು. ಎಲ್ಲರೂ ಕೂಡಿ ಅವರನ್ನು ನಾಶ ಮಾಡಿದ ಹೊರತು, ಕನಕಾಕ್ಷ ಮಹಾರಾಜರ ಮಕ್ಕಳನ್ನು ಕಾಪಾಡಲು ಸಾಧ್ಯವಿಲ್ಲ. ಈಗ ಆ ಸರೋವರವೆಲ್ಲಾ ಜಲವೃಕರಿಗೇ ವಶವಾಗಿದ್ದರೂ ಇರಬಹುದು" ಎಂದನು. ಆಗಲೇ ಅಲ್ಲಿಗೆ ಕನಕಾಕ್ಷ ರಾಜನ ಕೆಲ ಮಂದಿ ಸೈನಿಕರೂ ಬಂದು ಸೇರಿದರು.

"ಓಹೋಯ್! ಅಯ್ಯಗಳಿರಾ! ನನ್ನನ್ನು ಮರೆತಿರಾ? ದೊಡ್ಡದೊಂದು ಹೆಬ್ಬಾವು ನನ್ನ ಕಡೆಗೇ ಹರಿದುಕೊಂಡು ಬರುತ್ತಿದೆ." ಎಂದು ಹಂಸರಥ ಸಾರಥಿ ಕೆಟ್ಟ ಸ್ವರದಿಂದ ಕೂಗಿದನು.

ಆ ಕೂಡಲೇ ಸಿದ್ಧಸಾಧಕನು ನರವಾನರದ ಬೆನ್ನನ್ನು ತಟ್ಟಿ ಕೈಯೆತ್ತಿ ತೋರಿಸುತ್ತ, "ಅಲ್ಲಿ ಸಿಕ್ಕಿಕೊಂಡಿದ್ದವನನ್ನು ಕೆಳಗೆ ತೆಗೆದುಕೊಂಡು ಬಾ" ಎಂದು ಆಜ್ಞೆ ಮಾಡಿದನು.

ನರವಾನರವು ದಬಕ್ಕನೆ ಮರದ ಮೇಲೆ ಹಾರಿ, ಅದರ ಭಾರಕ್ಕೆ ಕೆಲವು ಕೊಂಬೆಗಳು ಮುರಿಯುತ್ತಿರಲು, ಅದನ್ನು ಲಕ್ಷ್ಯ ಮಾಡದೆ ಸರಸರನೆ ಮೇಲೆ ಹೋಯಿತು. ಒಂದು ನಿಮಿಷದೊಳಗೆ ಅದು ಅಷ್ಟೆತ್ತರಕ್ಕೆ ಹತ್ತಿ, ಒಂದು ಕೈಯಿಂದ ಆ ಸಾರಥಿಯನ್ನು ಹಿಡಿದು. ಎರಡನೇ ಕೈಯಿಂದ ಹೆಬ್ಬಾವನ್ನು ಹಿಡಿದು. ಬಳ್ಳಿಗಳ ನಡುವಿನಿಂದ ಅದನ್ನು ಎಳೆಯಿತು. ಸಾರಥಿ ಭಯಂಕರವಾದ ನರವಾನರವನ್ನು ನೋಡಿ ಹೆದರಿ ಕಿರಿಚುತ್ತ, ದೊಡ್ಡದೊಂದು ಕೊಂಬೆಯನ್ನು ಹಿಡಿದು. "ಇನ್ನು ನನ್ನನ್ನು ಬಿಡು. ನಾನು ಇಳಿದುಕೊಳ್ಳುತ್ತೇನೆ" ಎಂದು ಕೂಗಿದನು.

ಅಷ್ಟರಲ್ಲಿ ಜಲವೃಕ ರಾಕ್ಷಸರ ಗುಂಪೊಂದು ಕಲ್ಲಿನ ಗದೆಗಳನ್ನು ತಿರುಗಿಸುತ್ತ "ಜೈ ಜಲವೃಕನಾಥಾ!" ಎಂದು ಕೂಗುತ್ತಾ ಅವರ ಕಡೆಗೇ ಓಡಿ ಬಂದಿತು. ಎಲ್ಲರೂ ಅವರನ್ನು ಎದುರಿಸಲು ಆಯುಧಗಳನ್ನು ಹಿಡಿದು ನಿಂತರು.

ಆ ಜಲವೃಕ ರಾಕ್ಷಸರ ಗುಂಪಿನಲ್ಲಿ ಖಡ್ಗಮೃಗದ ಮೇಲೆ ಕುಳಿತುಕೊಂಡವನೊಬ್ಬ ತನ್ನ ಗದೆಯನ್ನು ಎತ್ತೆತ್ತಿ ತೋರಿಸುತ್ತ, "ಬಿಡಬೇಡಿ. ಇಲ್ಲಿರುವವರಲ್ಲಿ ಒಬ್ಬನೂ ಜೀವದಿಂದ ಹೋಗಕೂಡದು!" ಎಂದು ಜಲವೃಕರಿಗೆ ಅಪ್ಪಣೆ ಮಾಡಿದನು.

ಮರದ ಕೊಂಬೆಯಲ್ಲಿ ಇದನ್ನು ನೋಡಿದ ನರವಾನರವು ಅರಣ್ಯವೇ ನಡುಗುವಂತೆ ಕೂಗಿ, ಕೈಯಲ್ಲಿದ್ದ ಹೆಬ್ಬಾವನ್ನು ಚಾಟಿಯಂತೆ ಬೀಸಿ ಠಪಾಲ್ಲೆನಿಸಿ, ಖಡ್ಗಮೃಗದ ಮೇಲಿದ್ದ ಜಲವೃಕನ ಮೇಲೆಯೇ ಹಾರಿಬಿಟ್ಟಿತು

(ಮುಂದಿನ ಸಂಚಿಕೆಯಲ್ಲಿ ಮುಕ್ತಾಯ)






# ವೀರಹನುಮಾನ್

ಮಣಿಪುರ ರಾಜ್ಯವನ್ನಾಳುವ ಮಣಿಧ್ವಜನು ಜನ್ಮತಃ ವೀರ ಧೀರ ಪರಾಕ್ರಮವಂತನಾಗಿದ್ದುದು ಮಾತ್ರವಲ್ಲದೆ ಎಣೆಯಿಲ್ಲದ ಶಿವಭಕ್ತ. ಶಿವನ ಪ್ರೀತಿಗಾಗಿ ನೂರು ಸಾರಿ ಹೋಮ ಮಾಡಿ, ಹೋಮ ಕುಂಡಕ್ಕೆ ತನ್ನನ್ನೇ ಸಮರ್ಪಿಸಿ, ಅನೇಕ ಸಾರಿ ಪುಟ ಮಾಡಿದ ಸುವರ್ಣದಂತಹ ಶರೀರ ಪಡೆದವನು. ಹತ್ತು ಸಾರಿ ತನ್ನ ತಲೆಯನ್ನೇ ಕಡಿದು ಹೋಮ ಕುಂಡಕ್ಕೆ ಹಾಕಿದ್ದನು. ಆ ಬಗೆಯ ಅತ್ಯುಗ್ರ ಸಾಧನೆಗಳಿಂದ ಸಾರಿ ಸಾರಿಗೂ ಶಿವನನ್ನು ಪ್ರತ್ಯಕ್ಷ ಮಾಡಿಕೊಂಡು ವರಗಳನ್ನು ಪಡೆದ ಮಹಾವೀರ ಶೈವನು.

ಅವನು ನೆನೆಸಿದಾಗಲೆಲ್ಲಾ ಶಿವನ ತ್ರಿಶೂಲವು ಬಂದು ಅವನ ಶತ್ರುಗಳನ್ನು ಸಂಹಾರ ಮಾಡಿ ಮಾಯವಾಗಿಹೋಗುತ್ತಿತ್ತು. ಬೇಕೆನಿಸಿದಾಗ ಪಾಶುಪತಾಸ್ತ್ರವನ್ನು ಸಹಾ ಪಡೆಯಬಲ್ಲವನಾಗಿದ್ದನು. ಎಲ್ಲಕ್ಕೂ ಮೀರಿ ಆವನಿಗೆ ಬೇಕೆನಿಸಿದಾಗ ಶಿವನೇ ಬಂದು ಸಹಾಯಕನಾಗಿ ನಿಂತು, ಅವನಿಗಾಗಿ ಅವನ ಶತ್ರುಗಳೊಂದಿಗೆ ಯುದ್ಧ ಮಾಡುವಂತಹ ಅಪೂರ್ವ ವರವನ್ನೂ ಪಡೆದಿದ್ದನು. ಎಲ್ಲರೂ ಅವನಿಗೆ ಹೆದರುತ್ತಿದ್ದರು. ಹೀಗಾದುದರಿಂದ, ತನಗೆ ಯಾರೂ ಇದಿರಿಲ್ಲವೆಂಬ ಗರ್ವವು ಅವನಲ್ಲಿ ಮಿತಿ ಮೀರಿತ್ತು. ಅಂತೆಯೇ ಮಣಿಧ್ವಜನು ನಿರಂಕುಶ ಪ್ರಭುವಾಗಿ ರಾಜ್ಯಪಾಲನೆ ಮಾಡುತ್ತಿದ್ದನು.

ಅವನ ಅಧರ್ಮ ಪರಿಪಾಲನೆಯ ಚಂದ ಹೇಗಿದ್ದಿತೆಂದರೆ, ಶಿವನ ಹೊರತು ಬೇರೆ ದೇವರನ್ನು ಪೂಜಿಸುವವರನ್ನೂ, ಬೇರೆ ಮತಗಳನ್ನು ಅವಲಂಬಿಸುವವರನ್ನೂ ತನ್ನ ರಾಜ್ಯದಿಂದಲೇ ಹೊರಗೆ ಓಡಿಸಿಬಿಟ್ಟಿದ್ದನು. ಶಿವಾಲಯಗಳ ಹೊರತು ಬೇರೆ ಆಲಯಗಳನ್ನೆಲ್ಲಾ ಧ್ವಂಸ ಮಾಡಿಸಿಬಿಟ್ಟನು.

ಹೀಗೆ ಮಣಿಧ್ವಜನಿಂದ ಓಡಿಸಲ್ಪಟ್ಟವರೆಲ್ಲಾ ಅಯೋಧ್ಯೆಗೆ ಶರಣಾರ್ಥಿಗಳಾಗಿ ಹೋಗಿ, ರಾಮನೊಂದಿಗೆ ತಮ್ಮ ಕಷ್ಟಗಳನ್ನು ಮೊರೆಯಿಟ್ಟುಕೊಂಡರು. "ಹೆದರ ಬೇಡಿರಿ. ಮಣಿಧ್ವಜನ ಅಹಂಕಾರವು ನಾಶವಾಗುವ ಕಾಲವು ಸಮೀಪಿಸಿತು. ನೀವು ಬೇಗದಲ್ಲೇ ನಿಮ್ಮ ಊರುಗಳಿಗೆ ಹೋಗುವಂತಾಗು



ತ್ತದೆ. ಅದುವರೆಗೆ ನೆಮ್ಮದಿಯಾಗಿ ನನ್ನ ರಾಜ್ಯದಲ್ಲಿರಿ" ಎಂದು ರಾಮನು ಅವರಿಗೆ ಅಭಯ ಹೇಳಿ, ಅವರೆಲ್ಲ ಸುಖವಾಗಿರುವಂತೆ ತಕ್ಕ ಏರ್ಪಾಡುಗಳನ್ನು ಮಾಡಿಸಿ ಕೊಟ್ಟಿದ್ದನು.

ಸ್ವೈರವಿಹಾರದ ರೀತಿಯಲ್ಲಿ ಹೋಗುತ್ತಿದ್ದ ರಾಮನ ಯಾಗಾಶ್ವವು ಮಣಿಪುರ ರಾಜ್ಯವನ್ನು ಪ್ರವೇಶ ಮಾಡಿತು. ಆ ಯಾಗಾಶ್ವದ ಸಂಗತಿಯನ್ನು ಮೊದಲೇ ಅರಿತಿದ್ದ ಮಣಿಧ್ವಜನು, ಅದು ತನ್ನ ರಾಜ್ಯದ ಮೇರೆಯೊಳಗೆ ಬಂದ ಕೂಡಲೇ ಅದನ್ನು ಹಿಡಿದು ತನ್ನ ರಾಜಧಾನಿಗೆ ತೆಗೆದುಕೊಂಡು ಹೋಗಿ ತನ್ನ ಅಶ್ವಶಾಲೆಯಲ್ಲಿ ಬಂಧಿಸಿದನು.

ಅದನ್ನು ನೋಡಿ ಲಕ್ಷ್ಮಣನು, ಕುದುರೆಯನ್ನು ಬಿಟ್ಟುಕೊಟ್ಟು, ರಾಮನ ಮೇಲೆ ಸ್ನೇಹಭಾವವನ್ನು ತಾಳಿ ಯಾಗಕ್ಕೆ ಸಹಾಯಕನಾಗಿರುವಂತೆ, ದೂತನ ಮೂಲಕ ರಾಜಮರ್ಯಾದೆಗಳೊಂದಿಗೆ ಮಣಿಧ್ವಜನಿಗೆ ಹೇಳಿ ಕಳುಹಿಸಿದನು.

ದೂತನು ಹೇಳಿದ ಮಾತು ಕೇಳಿ ಮಣಿಧ್ವಜನು, ಆ ದೂತನ ಬೆನ್ನಿನ ಮೇಲೆ, ತ್ರಿಶೂಲದ ಮುದ್ರೆ ಬೀಳುವಂತೆ ಕಾಯಿಸಿಟ್ಟು, "ಹೇಳು ನಿನ್ನ ರಾಮನಿಗೆ. ರಾವಣನೇ ಮೊದಲಾದ ಶಿವಭಕ್ತರನ್ನು ಕೊಂದ ರಾಮನನ್ನು ಶಿವ ಪ್ರೀತಿಗಾಗಿ ಭೈರವನ ವಿಗ್ರಹದ ಮುಂದೆ ಚಿತ್ರವಧೆ ಮಾಡಿ ಬಲಿಕೊಡಲು ಕಾದಿದ್ದೇನೆ. ಮಣಿಧ್ವಜನೆಂದರೆ ಏನೆಂದು ತಿಳಿಯಬೇಕಾದರೆ ಬರಲಿ! ಕೋಟಿ ಮಂದಿ ರಾಮಂದಿರು ಬರಲಿ! ನನಗೆ ಹುಲ್ಲಿಗೆ ಸಮ. ರಾಮದೂತರಿಗೆಲ್ಲಾ ತ್ರಿಶೂಲದ ಮುದ್ರೆಯೊತ್ತಲು ಕಾದಿದ್ದೇನೆಂದು ಹೇಳು. ನಡೆ" ಎಂದು ಹೇಳಿ, ಆ ದೂತನ ನೆತ್ತಿಯ ಮೇಲೆ ಬುಟ್ಟಿ ತುಂಬ ಭಸ್ಮವನ್ನು ಸುರಿದು ಕಳುಹಿಸಿದನು.

ಅದುವರೆಗೂ ಯಾವ ಪ್ರತಿಭಟನೆಯೂ ಇಲ್ಲದೆ ಬರುತ್ತಿದ್ದ ಭರತ ಲಕ್ಷ್ಮಣ ಶತ್ರುಘ್ನರಿಗೆ ಮಣಿಧ್ವಜನೊಂದಿಗೆ ಯುದ್ಧವು ತಟಸ್ಥವಾಯಿತು. ಭರತನು ಪಾಂಚಜನ್ಯಕ್ಕೆ ಸಮಾನವಾದ ಶಂಖಧ್ವನಿಯನ್ನು ಮಾಡಲು ದಿಕ್ಕುಗಳೆಲ್ಲಾ ಕಿವುಡಾದುವು.

ಯುದ್ಧವು ಪ್ರಾರಂಭವಾಗಿ ನಿಮಿಷನಿಮಿಷಕ್ಕೂ ತೀವ್ರವಾಯಿತು. ಒಂದು ಕಡೆಯಲ್ಲಿ ಶತ್ರುಘ್ನನು ಸುದರ್ಶನ ಚಕ್ರದಂತೆ ವಿಜೃಂಭಿಸಿ ಯುದ್ಧ ಮಾಡುತ್ತಿರಲು, ತನ್ನ ಕಡೆಗೆ ಸಾವಿರ ಹೆಡೆಗಳ ಶೇಷ ಸರ್ಪದಂತೆ ಚಾಚಿಕೊಂಡು ಪರಂಪರೆಯಾಗಿ ಬರುವ ಲಕ್ಷ್ಮಣನ ಶಸ್ತ್ರಾಸ್ತ್ರಗಳನ್ನು ಮಣಿಧ್ವಜನಿಂದ ತಾಳಿಕೊಳ್ಳಲಾಗಲಿಲ್ಲ. ಕಡೆಗೆ ಮಣಿಧ್ವಜನು ಶಿವನ ತ್ರಿಶೂಲವನ್ನು ಕರೆದನು.

ಆಗ ಮಣಿಧ್ವಜನ ಪೂಜಾಮಂದಿರದೊಳಗಿನಿಂದ ಮಿಂಚಿನಂತೆ ಪ್ರಕಾಶಿಸಿ, ಸಿಡಿಲಿನಂತೆ ಗುಡುಗುಡಿಸಿಕೊಂಡು ತ್ರಿಶೂಲವು ಲಕ್ಷ್ಮಣನ ಕಡೆಗೆ ತೂರಿ ಬಂದಿತು. ಸರಿಯಾಗಿ ಅದೇ ಸಮಯಕ್ಕೆ ಹನುಮಂತನು ಲಕ್ಷ್ಮಣನ ಬಳಿಗೆ ಬಂದೆರಗುತ್ತ, ಆನೆ ತನ್ನ ಸೊಂಡಿಲಿನಿಂದ ಕಬ್ಬಿನ ಜಲ್ಲೆಯನ್ನು ಹಿಡಿಯು

ನಂತೆ, ಸಂಹಾರಕ್ಕೆ ಬರುವ ಶಿವನ ತ್ರಿಶೂಲವನ್ನು ಎಡಗೈಯಿಂದ ಹಿಡಿದುಕೊಂಡು, ಗಂಭೀರಾಕಾರದಿಂದ ಪ್ರತ್ಯಕ್ಷ ಶಿವನಂತೆಯೇ ನಿಂತುಕೊಂಡನು.

ಅದನ್ನು ನೋಡಿ ಮಣಿಧ್ವಜನು ಸಂಭ್ರಮದಿಂದ ಶಿವನೇ ಇಳಿದು ಬಂದನೆಂದುಕೊಂಡು, ಕೈಯೆತ್ತಿ ಜೋಡಿಸಿ ನಮಸ್ಕರಿಸುವುದನ್ನು ನೋಡಿ, ಹನುಮಂತನು ನಕ್ಕು, "ಎಲವೋ ಮಹಾ ಶಿವ ಭಕ್ತನೇ! ನಾನು ಶಿವನಲ್ಲ. ಸಾಧಾರಣ ಕೋತಿ! ಹನವಂತನು. ರಾಮನ ಬಂಟ ಹನುಮಂತನು! ಗೊತ್ತಾಯಿತೇ? ಸರಿಯಾಗಿ ನೋಡಿ ಕೆಲಸ ಮಾಡು! ಈಗ ಬಾ ನನ್ನ ಮುಂದೆ !" ಎನ್ನುತ್ತಾ, ಗದೆಯನ್ನೆತ್ತಿ ಲಂಘಿಸಿದನು ಮಣಿಧ್ವಜನ ಮೇಲೆ.

ಮಣಿಧ್ವಜನು ತಪ್ಪಿಸಿಕೊಂಡು ಬಹುದೂರ ಓಡಿ ಹೋಗಿ ಹನುಮಂತನನ್ನು ನೋಡಿ ಅಪ್ರತಿಭನಾದನು. ಹನುಮಂತನ ಜಟಾಜೂಟವು ಗಾಳಿಯಲ್ಲಿ ಹಾರಾಡುತ್ತಿದ್ದಿತು. ಅವನ ಕಣ್ಣುಗಳು ಎರಡು ಅಗ್ನಿ ಗೋಳಗಳಂತೆ ಹೊಳೆಯುತ್ತಿದ್ದುವು. ಒಂದು ಕೈಯಲ್ಲಿ ತ್ರಿಶೂಲವನ್ನು ನೆಲಕ್ಕೆ ಆನಿಸಿಕೊಂಡು ಅಪರ ಮಹೇಶ್ವರನ ಹಾಗೆ ನಿಂತಿದ್ದನು.

ಇನ್ನು ತನಗೆ ಮರಣವು ತಪ್ಪಲಾರದೆಂದು ಅನುಮಾನವಾಯಿತು ಮಣಿಧ್ವಜನಿಗೆ. ಆದರೂ ಧೈರ್ಯ ಬಿಡದೆ ಪಾಶುಪತಾಸ್ತ್ರವನ್ನು ನೆನಪು ಮಾಡಿಕೊಂಡು ಮಂತ್ರವನ್ನು ಜಪಿಸುತ್ತ, ಬಿಲ್ಲಿಗೆ ಸಂಧಿಸಿ ಪ್ರಯೋಗಿಸಿದನು.

ಪಾಶುಪತಾಸ್ತ್ರದ ಉಷ್ಣೋಗ್ರತೆಯಿಂದ ಆ ಪ್ರದೇಶವೆಲ್ಲಾ ಕುದಿದುಹೋಯಿತು. ಲಕ್ಷ್ಮಣ, ಭರತ, ಶತ್ರುಘ್ನರೂ ಅವರ ಸೈನ್ಯವೂ ಮೂರ್ಛಿತರಾಗಿ ನೆಲಕ್ಕೊರಗಿದರು. ಹನುಮಂತನು ರಾಮನಾಮವನ್ನು ಜಪಿಸುತ್ತ ಎದೆಚಾಚಿಕೊಂಡು ಆ ಮಹಾಸ್ತ್ರಕ್ಕೆ ಇದಿರಾಗಿಹೋದನು. ಪಾಶುಪತಾಸ್ತ್ರವು ರಭಸದಿಂದ ಬಂದು ಹನುಮಂತನ ಗುಂಡಿಗೆಗೆ ತಾಗಿ ಮುರಿದು ಪುಡಿಪುಡಿಯಾಗಿ ಅಲ್ಲೇ ಐಕ್ಯವಾಯಿತು. ಹನುಮಂತನು ಮಣಿಧ್ವಜನ ರಥವನ್ನು ಗುದ್ದಿ ಪುಡಿ ಪುಡಿ ಮಾಡಿ, ಗದೆಯನ್ನು ಮಣಿಧ್ವಜನ ತಲೆಯ





ಮೇಲೆ ಗುರಿಯಿಟ್ಟು ಎತ್ತಿಕೊಂಡು ಧುಮುಕಿದನು. ಗದೆಯ ಪೆಟ್ಟು ಮಣಿಧ್ವಜನ ಬೆನ್ನಿಗೆ ಒರೆಸಿದಂತೆ ಬಿದ್ದಿತು. ಆ ನೋವಿನಿಂದ ಮಣಿಧ್ವಜನು ಹರಹರಾ ಎಂದು ಕೂಗುತ್ತ, ಬೇರೇನೂ ತೋರದೆ ಓಡಿ ಹೋಗಿ ಪೂಜಾ ಮಂದಿರದೊಳಗೆ ನುಗ್ಗಿ, ಶಿವ ಲಿಂಗಕ್ಕೆ ತಲೆಯನ್ನು ಹೊಡೆದುಕೊಳ್ಳುತ್ತ, "ಹರ ಹರಾ! ಮಹಾದೇವಾ! ಶರಣಾದೆ! ಬೇಗ ಬಾ! ರಕ್ಷಿಸು!" ಎಂದು ಕೂಗಿದನು.

"ಇದೇನು ಮಣಿಧ್ವಜಾ? ಕೋಟಿಮಂದಿ ರಾಮರು ಬಂದರೂ ಲೆಕ್ಕಿಸಲಾರೆ ಎಂದೆಯಲ್ಲಾ! ಕೇವಲ ರಾಮನ ಬಂಟನೊಬ್ಬನನ್ನು ಇದಿರಿಸಲಾರದೆ ಹೋದೆಯಾ? ಹೋಗು. ಯುದ್ಧ ಮಾಡು. ನಿನಗೆ ಬೆಂಬಲವಾಗಿ ನಾನಿದ್ದೇನೆ" ಎಂದು ಶಿವಲಿಂಗದಿಂದ ಮಾತುಗಳು ಹೊರಟುವು.

ಧೈರ್ಯಗೊಂಡು ಮಣಿಧ್ವಜನು ಮತ್ತೆ ಯುದ್ಧ ರಂಗಕ್ಕೆ ತಿರುಗಿದನು. ಶಿವನು ನಂದಿವಾಹನನಾಗಿ ಯುದ್ಧರಂಗದಲ್ಲಿ ಮಣಿಧ್ವಜನ ಮುಂದೆ ಸಾಕ್ಷಾತ್ಕಾರ ನಾದನು. ಆಗ ಹನುಮಂತನು ಶಿವನನ್ನು ನೋಡಿ, "ನೀನು ಮಹಾದೇವನೇ ಆಗಿರಬಹುದು. ಆದರೂ ರಾಮನ ಬೆಂಬಲವಿರುವ ನಾನು ನಿನಗೇನೂ ಅಂಜ ಲಾರೆ! ತಾಳಿಕೋ" ಎಂದು ಸಿಂಹಗರ್ಜನೆ ಮಾಡಿ ಭಯಂಕರ ರೂಪದಿಂದ ಶಿವನ ಮೇಲೆ ಹೋದನು. ಅವನ ಗರ್ಜನೆಗೆ ಹೆದರಿ ನಂದಿ ಶಿವನನ್ನು ಕೆಳಕ್ಕೆ ಹಾಕಿ ಓಡಿಹೋಯಿತು.

ಶಿವನು ಎದ್ದು ನಿಂತು ಹನುಮಂತನೊಂದಿಗೆ, "ನನ್ನ ತ್ರಿಶೂಲವನ್ನು ಹಿಡಿದೆ! ಪಾಶುಪತಾಸ್ತ್ರ ವನ್ನು ನುಂಗಿದೆ. ಹೀಗೆ ಮಾಡಲು ವಿಷ್ಣುದೇವ ನೊಬ್ಬನಿಗೇ ಸಾಧ್ಯ. ನಿನ್ನಲ್ಲಿ ವಿಷ್ಣು ಅಡಗಿರುವ ನೇನು? ನಿಜ ಹೇಳು" ಎಂದನು.

"ಶಿವನೋ ವಿಷ್ಣುವೋ ನನಗೇನೂ ಸಂಬಂಧ ವಿಲ್ಲ. ನಾನು ಮಾನವ ಮಾತ್ರನಾದ ರಾಮನನ್ನು ನಂಬಿಕೊಂಡಿರುವವನು. ಕೋತಿಯಾದ ನನಗೆ ಆ ಮಾನವನೇ ದೇವರು. ನನ್ನ ಬುದ್ಧಿಯೂ ಕೋತಿಯ ಹಾಗೆ ಚಂಚಲವೆಂದೇ ಹೇಳುತ್ತಾರೆ. ನಾನು ನನ್ನ ಬುದ್ಧಿಯನ್ನು ಏಕಾಗ್ರತೆಯಿಂದ ಮಾನವರಾಜ ರಾಮನ ಮೇಲಿರಿಸಿ, ಬೇಕಾದಷ್ಟು ಮನೋಬಲ ಪಡೆದಿದ್ದೇನೆ. ಎಷ್ಟೋ ಸಾಹಸಗಳನ್ನು ಮಾಡಿದ್ದೇನೆ. ಪರಾಕ್ರಮಗಳನ್ನು ತೋರಿಸಿದ್ದೇನೆ. ಇದನ್ನು ಭಕ್ತಿ ಎಂದರೂ ಲಕ್ಷ್ಯಸಾಧನೆ ಎಂದರೂ ಒಂದೇ. ನಾನು ನಂಬಿರುವ ರಾಮಚಂದ್ರನು ಲೋಕಕಲ್ಯಾಣಕ್ಕಾಗಿ ಮಾಡುವ ಅಶ್ವಮೇಧಯಾಗವನ್ನು ಯಾರದೇ ಎಂತಹ ಶಕ್ತಿಗಳೂ ಇದಿರಿಸಲಾರವು. ಭಕ್ತರೆಂದು ಹೇಳಿ, ಮಣಿಧ್ವಜನಂತಹವರು ಮಾಡುತ್ತಿರುವು ದೇನು? ಇಂತಹ ಅಹಂಕಾರಿಗಳಿಗೆ ಸ್ವಾರ್ಥಪರರಿಗೆ ಸಹಾಯಕನಾಗಿರುವ ದೇವನು ಮಹಾದೇವನಾದ ರೇನು, ವಿಷ್ಣುದೇವನಾದರೇನು? ಅಂತಹ ದೇವರು ಗಳಿಂದ ಪ್ರಜೆಗಳಿಗೆ ಪ್ರಯೋಜನವಾದರೂ ಏನು?"



44-4

ಎಂದು ಹೇಳಿ ಹನುಮಂತನು ದಿಕ್ಕುಗಳು ನಡುಗುವ ಹಾಗೆ ಪ್ರಾಣಿಗಳು ಮೂರ್ಛೆ ಬೀಳುವ ಹಾಗೆ ಗರ್ಜಿಸಿದನು. ಅವನ ಮಾತು ಕೇಳಿ ಶಿವನು ನೆಗಾಡಿ ಕೂಡಲೇ ಗಂಭೀರನಾಗಿ "ಹುಂ. ನಿನ್ನ ನೀತಿ ಮಾತುಗಳನ್ನು ಕೇಳಿ ನೆಗಾಡುವ ಸಮಯವಲ್ಲ. ನನ್ನ ಭಕ್ತನಿಗೆ ಸಹಾಯಕನಾಗಿ ಬಂದೆ. ನಾನೀಗ ನನ್ನ ಕೊನೆಯ ಆಯುಧ ಹಣೆಯ ಕಣ್ಣನ್ನು ತೆರೆದುಬಿಡುತ್ತೇನೆ. ತಾಳಿಕೋ !" ಎಂದನು.

"ಬೇಗ ತೆರೆದು ನಿನ್ನ ಮಹಾಭಕ್ತನಿಗೆ ಜ್ಞಾನದ ಕಣ್ಣು ಬರುವಂತೆ ಮಾಡು" ಎಂದ ಹನುಮಂತ.

ಶಿವನು ತನ್ನ ಮೂರನೇ ಕಣ್ಣನ್ನು ತೆರೆದ ಕೂಡಲೇ, ಭಗ್ಗನೆ ಪ್ರಳಯಾಗ್ನಿ ಎದ್ದು ಹನುಮಂತನ ಮೇಲೆ ಸುಳಿದು ಬಂತು. ಹನುಮಂತನು ಬಲಗೈಯನ್ನು ಚಾಚಿ, ಆ ಅಗ್ನಿಯನ್ನು ಸೆಳೆದು, ಹಿಂದೊಮ್ಮೆ ಶಿವನು ಹಾಲಾಹಲವನ್ನು ಹಿಡಿದು ಕುಡಿದ ಹಾಗೆ "ರಾಮಾರ್ಪಣ !" ಎನ್ನುತ್ತಾ ಬಾಯಿಯೊಳಗೆ ಹಾಕಿ ನುಂಗಿಬಿಟ್ಟನು.

ಆಗ ಶಿವನು ತಲೆ ದೂಗುತ್ತಾ ಮಣಿಧ್ವಜನನ್ನು ನೋಡಿ, "ನೋಡಿದೆಯಾ ಮಣಿಧ್ವಜಾ ! ಇನ್ನು ನಾನೇನೂ ಮಾಡುವಂತಿಲ್ಲ. ಎಲ್ಲವೂ ನಿನ್ನ ಕಣ್ಣೆದಿರೇ ನಡೆದುದರಿಂದ ನಿನಗೂ ತಿಳಿದಿರಬಹುದು. ಹನುಮಂತನೆಂದರೆ ಯಾರೆಂದು ಇನ್ನೂ ಅನುಮಾನದಲ್ಲಿರುವೆಯಾ ? ಬೇಡ. ಅನುಮಾನಬಿಡು. ಹನುಮಂತನು ನನ್ನ ಆತ್ಮಸ್ವರೂಪದವನು. ನನ್ನ ಅಂಶದಿಂದ ಅವತರಿಸಿದ ಅವನಲ್ಲಿ ನನ್ನ ಸರ್ವಶಕ್ತಿಗಳೂ ಲೀನವಾಗಿವೆ. ಭಕ್ತಿ ಎಂದರೆ ಏನೆಂಬುದನ್ನು ಅವನಿಂದಲೇ ತಿಳಿ ! ನಿನಗೆ ಒಳಿತಾಗಲಿ !" ಎಂದು ಹೇಳಿ ಶಿವನು ಅಂತರ್ಧಾನನಾದನು.

ಇಷ್ಟರಲ್ಲಿ ಶಿವನು ಆಕಾಶದಲ್ಲಿ ಹಾರಿ ದ್ರೋಣ ಪರ್ವತಕ್ಕೆ ಹೋಗಿ, ಸಂಜೀವಕರಣಿಯನ್ನು ಕಿತ್ತು ಕೊಂಡುಬಂದನು. ಆದರಿಂದ ಮೂರ್ಛೆ ಬಿದ್ದಿದ್ದ



ಲಕ್ಷ್ಮಣ, ಭರತ, ಶತ್ರುಘ್ನ ಮತ್ತು ಸೈನಿಕರನ್ನೂ ಬದುಕಿಸಿಬಿಟ್ಟನು. ಎಲ್ಲರೂ ನಿದ್ದೆಮಾಡಿ ಎದ್ದವರಂತೆ ಉತ್ಸಾಹದಿಂದ ಎದ್ದರು.

ಅಷ್ಟರಲ್ಲಿ ಮಣಿಧ್ವಜನಿಗೂ ಜ್ಞಾನದೃಷ್ಟಿ ತೆರೆದುಕೊಂಡಿತ್ತು. ಅವನು ಹನುಮಂತನ ಮುಂದೆ ಮೊಣಕಾಲೂರಿ ಕೈಜೋಡಿಸಿ ತಲೆಬಾಗಿ ನಮಸ್ಕಾರ ಮಾಡಿದನು.

ಆಗ ಹನುಮಂತನು ಮಣಿಧ್ವಜನೊಂದಿಗೆ, "ಮಣಿಧ್ವಜಾ ! ಕೇವಲ ಸ್ವಾರ್ಥದಿಂದ ನಿನ್ನ ಭಕ್ತಿ ಎಷ್ಟೊಂದು ಕ್ಷುದ್ರತೆಗಿಳಿಯಿತೆಂಬುದನ್ನು ತಿಳಿದೆಯಾ ? ಸ್ವಂತ ಪ್ರಯೋಜನಕ್ಕಾಗಿ ಪರಮಶಿವನನ್ನು ಸೇವಕನಂತೆ ವಿನಿಯೋಗಿಸಿಕೊಳ್ಳುವುದು ಭಕ್ತಿಯಾಗದು. ಜೀವಕೋಟಿಗಳೆಲ್ಲಾ ಸುಖವಾಗಿರಬೇಕೆಂಬ ಈಶ್ವರ ಸಂಕಲ್ಪವನ್ನು ನೆರವೇರಿಸುವುದೇ ನಿಜವಾದ ಭಕ್ತಿ. ನಿನ್ನಂತೆ ಮಾಡುವವರಿಂದಲೇ ದೇವತೆಗಳ ದೊಡ್ಡತನಗಳು ಕಡಿಮೆಯಾಗುತ್ತವೆ. ಭಕ್ತರೆಂದು



44-5



ಹೇಳಿಕೊಳ್ಳುವ ಸ್ವಾರ್ಥಸಾಧಕರನ್ನೂ, ಅಹಂಕಾರಿಗಳನ್ನೂ ನೋಡಿ ಅಸಹ್ಯಪಡುತ್ತ, ಒಳ್ಳೆಯವರು ನಾಸ್ತಿಕರಾಗಿ ಬದಲಾಯಿಸುತ್ತಿದ್ದಾರೆ. ಈಗ ನಿನ್ನ ಅಜ್ಞಾನವು ತೊಲಗಿಹೋದುದರಿಂದ, ಇನ್ನುಮೇಲೆ ದ್ವೇಷವನ್ನು ಬಿಟ್ಟು, ಎಲ್ಲದರಲ್ಲಿಯೂ ಅಡಗಿರುವುದು ಒಂದೇ ದೈವತ್ವವೆಂಬುದನ್ನು ಗುರುತಿಸಿಕೊಂಡು, ಎಲ್ಲಾ ಬಗೆಯ ಪ್ರಜೆಗಳಿಗೂ ಸುಖವಾಗುವಂತೆ ಮಾಡುವುದೇ ನಿನ್ನ ಜೀವನದ ಧ್ಯೇಯವಾಗಿಟ್ಟುಕೊಂಡು ಪರಿಪಾಲನೆ ಮಾಡು" ಎಂದು ಬೋಧಿಸಿದನು.

ಆಗ ಮಣಿಧ್ವಜನು ಹೀಗೆಂದನು: "ಅಂಜನೇಯ ಸ್ವಾಮಿಯೆ! ಗರ್ವವು ಮಿತಿಮೀರಿಹೋದರೆ ಹೊರತು ಜ್ಞಾನದೃಷ್ಟಿ ಬರುವುದಿಲ್ಲವೆಂದು ನನ್ನ ವಿಷಯದಲ್ಲಿ ನಿಜವಾಯಿತು. ನನ್ನ ಗರ್ವವು ವಿಪರೀತವಾಗಬೇಕೆಂತಲೇ ಶಿವನು ನಾನು ಕೇಳಿಕೊಂಡ ವರಗಳನ್ನೆಲ್ಲಾ ಕೊಟ್ಟನೆಂದು ಈಗ ಅರ್ಥವಾಗುತ್ತದೆ. ಗರ್ವದಿಂದ ನಾನು ಬಂಧಿಸಿದ ರಾಮನ ಯಾಗಾಶ್ವದಿಂದ ನನಗೆ ಒಳ್ಳೆಯದೇ ಆಯಿತು. ಜ್ಞಾನೋದಯವಾಗುವಂತಾಯಿತು. ಇದೆಲ್ಲವೂ ರಾಮಚಂದ್ರನ ದಯೆ! ನಾನು ರಾಮನ ಹತ್ತಿರ ಹೋಗಿ ಕ್ಷಮಾಪಣೆ ಕೇಳಿಕೊಂಡು, ಆತನ ಬಂಧು ಕೋಟಿಯಲ್ಲಿ ಒಬ್ಬನಾಗಬೇಕಾಗಿದೆ. ಅದುವರೆಗೂ ನನಗೆ ಶಾಂತಿಯಿಲ್ಲ." ಎಂದು ಹೇಳಿ ಯಾಗಾಶ್ವವನ್ನು ತಂದು, ನಮ್ರತೆಯಿಂದ ಲಕ್ಷ್ಮಣನಿಗೆ ಒಪ್ಪಿಸಿದನು. ಅದರೊಂದಿಗೆ ಅಪರಿಮಿತ ಧನಕನಕ ವಸ್ತ್ರಾಭರಣಗಳನ್ನು ಕಾಣಿಕೆಯಾಗಿಯೂ ಸಮರ್ಪಿಸಿಕೊಂಡನು.

ಮತ್ತೆ ಯಾಗಾಶ್ವವನ್ನು ಸ್ವೇಚ್ಛೆಯಾಗಿ ಹೋಗಲು ಬಿಟ್ಟು ಎಲ್ಲರೂ ಅದರ ಹಿಂದೆ ಹೊರಟರು. ಅವರನ್ನು ಕಳುಹಿಸಿಕೊಟ್ಟ ಮೇಲೆ ಮಣಿಧ್ವಜನ ಮನಸ್ಸು ತೀವ್ರವಾಗಿ ರಾಮನ ಮೇಲೆ ಹರಿಯಿತು.

ಮಣಿಧ್ವಜನಿಗೆ ಶುಭ, ಶೋಭ ಎಂಬ ಇಬ್ಬರು ಸುಂದರಿಯರಾದ ಕುಮಾರಿಯರಿದ್ದರು. ಆ ಮಕ್ಕಳು ಅವಳಿಜವಳಿಗಳಾಗಿಯೇ ಹುಟ್ಟಿದವರು. ಅವರನ್ನು ಕರೆದುಕೊಂಡು, ಮಂಗಳ ದ್ರವ್ಯಗಳೊಂದಿಗೆ ಮಣಿಧ್ವಜನು ಅಯೋಧ್ಯೆಗೆ ಹೊರಟನು. ಅಲ್ಲಿ ಅವನು ರಾಮನ ದರ್ಶನಮಾಡಿ, ತನ್ನ ಅಪರಾಧವನ್ನು ಹೇಳಿಕೊಂಡು, ಕ್ಷಮೆ ಕೇಳಿಕೊಂಡನು. ರಾಮನು ಮಣಿಧ್ವಜನನ್ನು ಆದರಿಸಿ ಸಮಾಧಾನ ಹೇಳಿ ಮಿತ್ರನನ್ನಾಗಿ ಸ್ವೀಕರಿಸಿಕೊಂಡನು. ತರುವಾಯ ಮಣಿಧ್ವಜನು ತನ್ನ ಕುಮಾರಿಯರನ್ನು ಲವಕುಶರ ವಧುಗಳಾಗಿ ಅಂಗೀಕರಿಸಿ, ತನಗೆ ರಘುವಂಶದೊಂದಿಗೆ ಬಾಂಧವ್ಯಭಾಗ್ಯ ನೀಡಬೇಕೆಂದು ರಾಮನನ್ನು ಪ್ರಾರ್ಥಿಸಿದನು. ರಾಮನು ಸಂತೋಷದಿಂದ ಅಂಗೀಕರಿಸಿ, ಅಶ್ವಮೇಧ ಯಾಗವು ಪೂರ್ತಿಯಾದ ಮೇಲೆ, ವಿವಾಹ ನಡೆಸೋಣವೆಂದೂ ಹೇಳಿದನು. ಮಣಿಧ್ವಜನು ತಾನು ತನ್ನ ರಾಜ್ಯದಿಂದ ಹೊರಡಿಸಿದವರನ್ನೆಲ್ಲಾ ಆದರಪೂರ್ವಕವಾಗಿ ತನ್ನ ರಾಜ್ಯಕ್ಕೆ ಕರೆದುಕೊಂಡು

ಹೋಗಿ, ಪ್ರಜೆಗಳ ಶ್ರೇಯಸ್ಸೇ ಶಿವಪೂಜೆ ಎಂದೂ, ಪ್ರಜೆಗಳ ಸೇವೆಯೇ ಭಕ್ತಿ ಎಂದೂ ಭಾವಿಸಿ ರಾಜ್ಯ ಪರಿಪಾಲನೆಗೆ ತೊಡಗಿದನು.

ರಾಮನ ಯಾಗಾಶ್ವವು ಪೂರ್ವದಿಕ್ಕಿನಿಂದ ಆಗ್ನೇಯಕ್ಕೆ ತಿರುಗಿ, ಹಾಗೆಯೇ ದಕ್ಷಿಣ ಪಶ್ಚಿಮ ದೇಶಗಳ ಮೇಲಿಂದಾಗಿ ಅಯೋಧ್ಯೆಗೆ ಹಿಂದಿರುಗಿ ಬಂದಿತು. ಆಮೇಲೆ ಅಶ್ವಮೇಧಯಾಗದ ಕ್ರಮಗಳು ಮುಂದುವರಿದುವು. ಕಿಷ್ಕಿಂಧೆಯಿಂದ ಸುಗ್ರೀವಾದಿ ವಾನರರು, ಲಂಕೆಯಿಂದ ವಿಭೀಷಣ, ಮಣಿಪುರದಿಂದ ಮಣಿಧ್ವಜ ಇನ್ನೂ ಅನೇಕಮಂದಿ ನಾನಾ ದೇಶಗಳ ರಾಜರು ದೊಡ್ಡದೊಡ್ಡ ಕಾಣಿಕೆಗಳೊಂದಿಗೆ ಬಂದರು. ವಿಭೀಷಣನು ಒಳ್ಳೆಯ ಮುತ್ತುಗಳನ್ನೂ, ಹವಳಗಳನ್ನೂ ಗಾಡಿಗಳಲ್ಲಿ ಸಾಗಿಸಿಕೊಂಡು ಬಂದನು. ಸುಗ್ರೀವನು ವಜ್ರಗಳನ್ನೂ, ಬಂಗಾರವನ್ನೂ ತಂದನು. ಮಣಿಧ್ವಜನು, ಮರಕತ, ಕೆಂಪುಗಳನ್ನೂ, ಚೀನಾಂಬರಗಳನ್ನೂ ತೆಗೆದುಕೊಂಡು ಬಂದನು. ಹೀಗೆ ಇನ್ನೂ ಅನೇಕರಾಜರು ತಂದ ಬೆಳ್ಳಿ ಬಂಗಾರ ಮಣಿಮಾಣಿಕ್ಯಗಳ ರಾಶಿಗಳು ಕೋಶಾಗಾರದಲ್ಲಿ ತುಂಬಿ ಹೋಗಿ ಹೊರಭಾಗದಲ್ಲಿ ಕೂಡಾ ರಾಶಿರಾಶಿಯಾಗಿ ಸೇರಿಸಿಡಲ್ಪಟ್ಟುವು.

ಲಕ್ಷ್ಮಣ, ಭರತ, ಶತ್ರುಘ್ನರು ನಾನಾ ದೇಶಗಳಲ್ಲಿ ಘನಸ್ವಾಗತಗಳಿಂದ, ರಾಜಮರ್ಯಾದೆಗಳನ್ನು ಹೊಂದಿ ದಿಗ್ವಿಜಯಮಾಡಿಕೊಂಡು, ತಮ್ಮ ಸೇನೆಗಳ ಕೀರ್ತಿಯನ್ನು ದೇಶಗಳಲ್ಲೆಲ್ಲಾ ಸ್ಥಾಪಿಸಿದರು. ಹನುಮಂತ, ಭರದ್ವಾಜ, ಗೌತಮ, ಅತ್ರಿ, ಅಗಸ್ತ್ಯ ಮೊದಲಾದ, ದೊಡ್ಡ ದೊಡ್ಡ ಋಷಿಗಳೂ ಅಶ್ವಮೇಧಯಾಗಕ್ಕೆ ಬಂದಿದ್ದರು. ರಾಮನ ಅಸ್ತ್ರ ಗುರುವಾದ ವಿಶ್ವಾಮಿತ್ರನಿಗೆ ಪ್ರತ್ಯೇಕ ಆಹ್ವಾನವು ಹೋಗಿತ್ತು.

ಹೀಗೆ ರಾಮನ ಅಶ್ವಮೇಧಯಾಗವು ಅತ್ಯಂತ ವೈಭವವಾಗಿ ನಡೆಯಿತು. ರಾಮನು ಧಾನ್ಯಗಳನ್ನು ಪ್ರತಿ ಮನೆಗಳಿಗೂ ಹಂಚಿ ಕೊಡಿಸಿದನು. ರಾಜ್ಯದೊಳಗಿನ ಸ್ತ್ರೀಯರಿಗೆಲ್ಲಾ ಚಿನ್ನವನ್ನೂ ಆಭರಣಗಳನ್ನೂ ಪಾಲು ಮಾಡಿ ಕೊಡಿಸಿದನು. ರಾಜ್ಯದಲ್ಲಿ ಪ್ರಜಾಹಿತವಾದ ಕಾರ್ಯಗಳನ್ನು ಮಾಡುವ ಬೇರೆ ಬೇರೆ ತರಗತಿಯವರಿಗೆ ಅನೇಕ ಬಹುಮಾನಗಳಿಂದ ಗೌರವ ನೀಡಿಸಿದನು.

ತರುವಾಯ ಎಲ್ಲರೂ ಮಣಿಧ್ವಜನ ಆಹ್ವಾನವನ್ನು ಸ್ವೀಕರಿಸಿ ಮಣಿಪುರಕ್ಕೆ ಹೊರಟರು. ಮಣಿಪುರದಲ್ಲಿ ಕುಶನಿಗೆ ಶುಭಳೊಂದಿಗೂ, ಲವನಿಗೆ ಶೋಭಳೊಂದಿಗೂ ಘನ ವೈಭವದಿಂದ ವಿವಾಹ ನಡೆಯಿತು. ಮದುವೆಯ ಸಂದರ್ಭದಲ್ಲಿ ಮಣಿಧ್ವಜನು ತನ್ನ ರಾಜ್ಯವನ್ನೆಲ್ಲಾ ಲವಕುಶರಿಗೆ ಕಾಣಿಕೆಯಾಗಿ ಸಮರ್ಪಿಸಿ, ಕೆಲವು ದಿನಗಳ ಮೇಲೆ ತಪಸ್ಸು ಮಾಡಲು ಅರಣ್ಯಕ್ಕೆ ಹೊರಟುಹೋದನು.



44-8